

ಅಕ್ಟೋಬರ್—1989

# ಸಿದ್ಧಗಂಗಾ



## ಆಸ್ತಿಕ ಬಂಧುಗಳಲ್ಲಿ ಒಂದು ವಿನಮ್ರ ಮನವಿ

1 ಶ್ರೀ ಸಿದ್ಧಗಂಗಾ ಮಠದಲ್ಲಿ ನಿತ್ಯ ನಾಲ್ಕು ಸಹಸ್ರ ವಿದ್ಯಾರ್ಥಿಗಳಿಗೆ ದಾಸೋಹ ವ್ಯವಸ್ಥೆ ನಡೆಯುತ್ತಿದೆ.

2 ನಾಲ್ಕು ಸಹಸ್ರ ವಿದ್ಯಾರ್ಥಿಗಳು ವಿವಿಧ ಸಮಾಜದಿಂದ ಬಂದವರಾಗಿರುತ್ತಾರೆ. ಜಾತ್ಯತೀತ ಮನೋಧರ್ಮವನ್ನು ರೂಢಿಸಿಕೊಂಡು ಬೆಳೆಯುವ ಮುಕ್ತ ವಾತಾವರಣ ಇಲ್ಲಿನ ವೈಶಿಷ್ಟ್ಯ.

3 ನಿತ್ಯ ಬರುವ ಸಹಸ್ರ ಸಹಸ್ರ ಯಾತ್ರಾರ್ಥಿಗಳಿಗೂ ದಾಸೋಹ ನಡೆಯುತ್ತಿದೆ.

4 **"ಸಿದ್ಧಗಂಗೆಯ ಊಟ ಶಿವಗಂಗೆಯ ನೋಟ"** ಎಂಬುದು ಗಾದೆ ಮಾತಾಗಿದೆ.

5 **" ಪ್ರಸಾದ ತೆಗೆದು ಕೊಂಡು ಹೋಗಿ "**–ಎಂಬುದೇ ಪರಮ ಪೂಜ್ಯ **ಶ್ರೀ ಶ್ರೀ ಗಳವರು** ಕ್ಷೇತ್ರಾರ್ಥಿಗಳಿಗೆಲ್ಲ ಹೇಳುವ ನಿತ್ಯ ಪಂಚಾಕ್ಷರಿ ಮಂತ್ರ

6 ಇಂಥ ದಾಸೋಹ ಮಣಿಹದಲ್ಲಿ ನಿಮ್ಮದೂ ಕಾಣಿಕೆ ಸಲ್ಲಿಸಲು ಅವಕಾಶವಿರುತ್ತದೆ.

7 ದಾಸೋಹಕ್ಕೆ ಧನ-ಧಾನ್ಯ ರೂಪದಲ್ಲಿ ಯಥಾಶಕ್ತಿ ಕಾಣಿಕೆ ಅರ್ಪಿಸಿ ಧನ್ಯರಾಗಲು ಇದೊಂದು ಅಪೂರ್ವ ಅವಕಾಶ.

8 ನೀವು ನೀಡುವ ಒಂದು ಸೇರು ಧಾನ್ಯ, ಒಂದು ರೂಪಾಯಿ ಸಾರ್ಥಕ ವಿನಿಯೋಗಕ್ಕೆ ಮೀಸಲಾಗುತ್ತದೆ.

9 ನೀವೂ ದಾಸೋಹದಲ್ಲಿ ಭಾಗಿಗಳಾಗುವ ಪುಣ್ಯ ಸಂಕಲ್ಪ ಇಂದೇ ಮಾಡುತ್ತೀರಾಗಿ **' ಸಿದ್ಧಗಂಗಾ '** ಆಶಿಸುತ್ತದೆ.

# ಸಿದ್ಧಗಂಗಾ

ಸಂಪುಟ-೨೫ ಸಂಚಿಕೆ-೧೦ ಸೆಪ್ಟಂಬರ್, ೧೯೮೯

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಆರಾಧ್ಯ ಲಿಂಗವೆ ಆಧಾರ ಲಿಂಗವೆ
ನಿರ್ಮಲ ಲಿಂಗವೆ ಶ್ರೀ ಗುರುವೆ । ಪೊಡಮಡುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

* * *

ಅಮೃತ ಲಿಂಗವೆ ಅನಿಮಿಷ ಲಿಂಗವೆ
ಆಚಾರ ಲಿಂಗವೆ ನನ್ನ ಗುರುವೆ । ಪೊಡಮಡುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

* * *

ಅಚ್ಚ ಲಿಂಗ ಗುರುವೆ ನಿಚ್ಚ ಲಿಂಗ ಗುರುವೆ
ಬಚ್ಚ ಬರಿಯ ಬೆಳಕೆ ಶೀಗುರುವೆ । ಪೊಡಮಡುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್. ವಿ. ವೀರಭದ್ರಯ್ಯ

## ಒಳ ಪುಟಗಳಲ್ಲಿ



## ಶ್ರೀ ವಾಣಿ



ಜಗತ್ತಿನಲ್ಲಿ ಎರಡು ವರ್ಗದ ಜನಗಳಿದ್ದಾರೆ. ಕಣ್ಣಿಲ್ಲದವರು; ಕಿವಿಯಿಲ್ಲದವರು; ಬುದ್ಧಿಯಿಲ್ಲದವರು; ಕಣ್ಣಿಲ್ಲದವರು ಜಗತ್ತಿನ ಸೌಂದರ್ಯವನ್ನು ಕಾಣಲಾರರು. ಕಿವಿಯಿಲ್ಲದವರು ಹೊರ ಹೊಮ್ಮುತ್ತಿರುವ ನಾದ ಮಾಧುರ್ಯವನ್ನು ಕೇಳಲಾರರು. ಬುದ್ಧಿಯಿಲ್ಲದವರು ಜಗತ್ತನ್ನು ಅರ್ಥ ಮಾಡಿಕೊಳ್ಳಲಾರರು. ಇವರೆಲ್ಲ ಒಂದು ವರ್ಗದ ಜನರು ಇನ್ನೊಂದು ವರ್ಗದ ಜನರಿದ್ದಾರೆ. ಅವರಿಗೆ ಕಣ್ಣಿವೆ ಆದರೆ ಜಗತ್ತನ್ನು, ಜಗತ್ತಿನ ಸೌಂದರ್ಯವನ್ನು ನೋಡಲಿಚ್ಛಿಸದವರು, ಕಿವಿಗಳಿವೆ ಆದರೆ ಜಗತ್ತಿನ ನಾದ ಮಾಧುರ್ಯವನ್ನು ಕೇಳಲಿಚ್ಛಿಸದವರು, ಬುದ್ಧಿಯಿದೆ ಆದರೆ ಜಗತ್ತನ್ನು ಆದರ ಮಹತ್ತನ್ನು ಅರ್ಥಮಾಡಿಕೊಳ್ಳಲಿಚ್ಛಿಸದವರು, ಜಗತ್ತಿಗೆ ಬಂದ ಪ್ರತಿಯೊಬ್ಬರ ಜೀವನಕ್ಕೂ ಒಂದು ಉದ್ದೇಶವಿದ್ದೇ ಇರುತ್ತದೆ. ಅದನ್ನರಿಯದೆ, ಸಾಧಿಸದೆ ಬಾಳುವುದು ವ್ಯರ್ಥವಾಗುವುದರಲ್ಲಿ ಸಂಶಯವಿಲ್ಲ. "ಅಂಧರು ಯಕ್ಷಗಾನ ನಾಟಕವನ್ನಾಡಿದರು" "ಕುರುಡು ಬಾಲಕ ಗಡಿಯಾರವನ್ನು ರಿಪೇರಿ ಮಾಡಿಕೊಟ್ಟ," ಕಿವುಡನೊಬ್ಬ ವೀಣೆಯನ್ನು ತಯಾರಿಸಿದ, ಹುಚ್ಚನೊಬ್ಬ ಬಾವಿಗೆ ಬಿದ್ದ ಮಗುವನೆತ್ತಿ ಪ್ರಾಣಉಳಿಸಿದ" ಮುಂತಾದ ಸುದ್ದಿಗಳನ್ನು ಪತ್ರಿಕೆಗಳಲ್ಲಿ ನೋಡುತ್ತೇವೆ. ಅವರ ಪ್ರಯತ್ನದ ಹಿಂದಿರುವ ಅದಮ್ಯ ಅಭೀಪ್ಸೆಯನ್ನು ಅರ್ಥ ಮಾಡಿಕೊಳ್ಳುವುದಿಲ್ಲ. ಅವರಂತೆ ಮುಂದುವರಿಯಬೇಕೆಂಬ ಸಂಕಲ್ಪ ಮಾಡುವುದಿಲ್ಲ. ದುಡಿಮೆಯ ಬೆಲೆ ಮತ್ತು ಆನಂದಗಳು ನಮಗೆ ತಿಳಿದೇ ಇಲ್ಲ. ಸದಾ ಇನ್ನೊಬ್ಬರ ದುಡಿಮೆಯ ಮೇಲೆ ಬದುಕಲು ಹವಣಿಸುತ್ತೇವೆ; ತಹತಹಪಡುತ್ತೇವೆ. ವ್ಯಕ್ತಿತನಗಿರುವ ಬೆಲೆಯುಳ್ಳ ಕಣ್ಣು, ಕಿವಿ, ಬುದ್ಧಿ ಮುಂತಾದುವುಗಳ ಶಕ್ತಿಯನ್ನರಿತು ಸದುಪಯೋಗ ಮಾಡಿಕೊಳ್ಳಬೇಕು ಅವುಗಳನ್ನು ರಚನಾತ್ಮಕ ಕಾರ್ಯಗಳಲ್ಲಿ ತೊಡಗಿಸಬೇಕು. ಇದನ್ನರಿತೇ 'ಕಾಯಕ'ಕ್ಕೆ ಮಹತ್ವವನ್ನು ಕೊಟ್ಟದ್ದು. ವ್ಯಕ್ತಿ ಮತ್ತು ಸಮಾಜದ ಅಭಿವೃದ್ಧಿಗೆ, ವಿಕಾಸಕ್ಕೆ, ಆತ್ಮೋನ್ನತಿಗೆ ರಾಜಮಾರ್ಗ ದುಡಿಮೆ. ಆದರೆ ಇಂದು ಕಣ್ಣಿದ್ದೂ ಕುರುಡರು, ಕಿವಿ ಇದ್ದೂ ಕಿವುಡರು; ಬುದ್ಧಿ ಇದ್ದೂ ಅಜ್ಞಾನಿಗಳು ಹೆಚ್ಚಾಗುತ್ತಿದ್ದಾರೆ. ಇದು ಒಳ್ಳೆಯದಲ್ಲ. ಕ್ರಿಯಾಶೀಲತೆ ಮಾನವ ಮಹೋನ್ನತಿಗೆ ಮಂಗಳ ದೀಪ. ಎಲ್ಲ ವೃತ್ತಿಯ, ಪ್ರವೃತ್ತಿಯ ಜನರಿಂದು ಕ್ರಿಯಾಶೀಲರಾಗಬೇಕಾಗಿದೆ; ಸಕ್ರಿಯಾಶೀಲರಾಗಬೇಕಾಗಿದೆ. ಅಧ್ಯಾಪಕ ಅಧ್ಯಯನ ಮಾಡದೆ ತರಗತಿಗೆ ಹೋಗಬಾರದು, ವಿದ್ಯಾರ್ಥಿ ಅಭ್ಯಾಸನಿಷ್ಠನಾಗದೆ ಕಾಲಹರಣ ಮಾಡಬಾರದು. ರೈತ ತನ್ನ ಹೊಲವನ್ನು ಮೇಲಿಂದ ಮೇಲೆ ಉಳುಮೆ ಮಾಡದೆ ಬಿತ್ತಬಾರದು. ವೈದ್ಯ ರೋಗಿಯ ಆರೈಕೆ ಮಾಡದಿರಬಾರದು, ನ್ಯಾಯವಾಗಿ ಮೊಕದ್ದಮೆಯ ಅಧ್ಯಯನ ಮಾಡದೆ ನ್ಯಾಯಲಕ್ಕೆ ಹೋಗಬಾರದು, ವಿರಕ್ತರು, ಸ್ವಾಮಿಗಳು ತಮ್ಮ ಪೂಜಾಫಲವನ್ನು ಮೋಜಕ್ಕೆ ನೀಡದಿರಬಾರದು. ಕಣ್ಣಿನ ಶಕ್ತಿ ವಿಶೇಷವನ್ನು ತಿಳಿದು ಬಳಸುವುದಾಗಬೇಕು, ಕಿವಿಯ ಶಕ್ತಿ ವಿಶೇಷವನ್ನೂ ತಿಳಿದು ಉಪಯೋಗ ಮಾಡಿಕೊಳ್ಳಬೇಕು, ಬುದ್ಧಿಯ ಬೆಲೆ ತಿಳಿದು ಬದುಕನ್ನು ಸಾರ್ಥಕ ಮಾಡಿಕೊಳ್ಳಬೇಕು.

(16-9-89 ರ ಪ್ರಾರ್ಥನಾ ಸಭೆ)

**ಸಿದ್ಧಗಂಗಾ ಮಾಸ ಪತ್ರಿಕೆ**

ಶ್ರೀ ಸಿದ್ಧಗಂಗಾ ಮಠ-572 .04

ತುಮಕೂರು ಜಿಲ್ಲೆ.

ಪ್ರಧಾನ ಸಂಪಾದಕರು

**ಪ್ರೊ॥ ಚನ್ನಪ್ಪ ಎರೇಸೀಮೆ**

* * *

ಸಂಪಾದಕರು

**ಹೆಚ್. ವಿ. ವೀರಭದ್ರಯ್ಯ**

* * *

ಸಹ ಸಂಪಾದಕರು

ಬಿ. ವೀರಭದ್ರಯ್ಯ

ಪಿ. ಎನ್. ಚಂದ್ರಶೇಖರಯ್ಯ

* * *

ಜಾಹೀರಾತು ವಿಭಾಗ

**ಎಂ. ರೇಣುಕಾರಾಧ್ಯ**

* * *

ವಿತರಣೆ ವಿಭಾಗ

**ಆರ್. ಎಸ್. ಮಲ್ಲೇಶಪ್ಪ**

* * *

ಪ್ರಕಾಶಕರು

**ಹೆಚ್. ಬಿ. ಗಂಗಾಧರಯ್ಯ**

ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

* * *

ಮುದ್ರಕರು

**ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ**

* * *

ಪ್ರಕಟಣೆಯ ಸ್ಥಳ

ಶ್ರೀ ಸಿದ್ಧಗಂಗಾ ಕ್ಷೇತ್ರ

**ಚಂದಾ ವಿವರ**

ವಾರ್ಷಿಕ ಚಂದಾ 20-00 ರೂ

ಅಜೀವ ಸದಸ್ಯತ್ವ 201-00 ರೂ


**ಲೇಖಕರಲ್ಲಿ ಮನವಿ**

'ಸಿದ್ಧಗಂಗಾ' ಶ್ರೀ ಸಿದ್ಧಗಂಗಾ ಮಠದಿಂದ ಪ್ರಕಟವಾಗುತ್ತಿರುವ ಮಾಸ ಪತ್ರಿಕೆ. ಶ್ರೀ ಮಠದ ಹಳೆಯ ವಿದ್ಯಾರ್ಥಿ ಸಂಘದ ಹೆಮ್ಮೆಯ ಸೇವಾ ಪುರವಣಿ, ಮೇಲಾಗಿ ಶ್ರೀ ಮಠದ ಮುಖವಾಣಿ, ಪೂಜ್ಯ ಶ್ರೀ ಶ್ರೀ ಡಾ॥ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಮಾರ್ಗದರ್ಶನದಲ್ಲಿ ಮುನ್ನಡೆದಿರುವ ಪತ್ರಿಕೆ. ತ್ರಿವಿಧ ದಾಸೋಹ ಸೇವಾ ತತ್ಪರತೆಯಿಂದ ಹೆಜ್ಜೆ ಹಾಕುತ್ತಿದೆ ಈ ಧ್ಯೇಯ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಧರ್ಮ, ವಿಜ್ಞಾನ, ಶಿಕ್ಷಣ. ಇತಿಹಾಸ, ವೈಚಾರಿಕ, ಚಿಂತನ ಮುಂತಾದ ಲೇಖನಗಳನ್ನು ಸ್ವಾಗತಿಸುತ್ತದೆ. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆಸ್ಟಾಂಪುಗಳನ್ನು ಲಗತ್ತಿಸಿರಬೇಕು. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ: ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು ಸ್ವೀಕೃತ ಲೇಖನಗಳಿಗೆ ಸೂಕ್ತ ಸಂಭಾವನೆ ಕೊಡಲಾಗುವುದು.

---

"ಸಂಪಾದಕರು"

'ಸಿದ್ಧಗಂಗಾ' ಕನ್ನಡ ಮಾಸಪತ್ರಿಕೆ

ಶ್ರೀ ಸಿದ್ಧಗಂಗಾ ಕ್ಷೇತ್ರ-572 104

ತುಮಕೂರು ಜಿಲ್ಲೆ.

ಇವರಿಗೆ ಕಳುಹಿಸಿಕೊಡಬೇಕಾಗಿ ಪ್ರಾರ್ಥನೆ

## ಶ್ರೀ ಸಿದ್ಧಲಿಂಗೇಶ್ವರ ವಚನ



ಚಿತ್ತಿನ ಮನೆಯಲ್ಲಿ ಸತ್ತಿರ್ಪನವನಾಶಾ?
ಸತ್ತವನೋಡಿ, ಎತ್ತ ಹೋದರೆ
ಎತ್ತ ಹೋದವ ಸತ್ತ, ಸತ್ತವನೆದ್ದು ಕೂಗುತ್ತಿದ್ದಾನೆ
ಈ ಚಿತ್ರವನೇನೆಂಬೆನು
ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ.

ಚಿದ್ರೂಪ ಬ್ರಹ್ಮಕ್ಕಂಗವಾದ ಅಷ್ಟತನುಗಳಿಗೆ ಅಷ್ಟವಿಧ ಭಕ್ತಿಯನ್ನು ಅಳವಡಿಸಿಕೊಂಡು ಲಿಂಗಾಂಗ ಸಂಬಂಧದಾಚರಣೆಯನ್ನು ಪರಿಪಾಲಿಸುತ್ತ ಲಿಂಗ ಸ್ವರೂಪಿಯಾಗಿರುವ ಶರಣನು ಲಿಂಗಸಂಬಂಧದ ನಿರ್ಣಯವನ್ನು ಅರಿತು ಆಚರಿಸಿ, ಲಿಂಗವನ್ನು ತನ್ನೊಳಗು ಮಾಡಿಕೊಳ್ಳುವುದಕ್ಕಾಗಿ ಸಕಲೇಂದ್ರಿಯಗಳಲ್ಲಿ ಸರ್ವಾಂಗ ಲಿಂಗಸಂಬಂಧವಾಗಿ ನಿರ್ಭಾವವಾಗಿ, ಚಿದ್ರೂಪ ಬ್ರಹ್ಮವೇ ತಾನಾದ ಶರಣನು ಅಂಗೈಯಲ್ಲಿ ಲಿಂಗವನ್ನಿಟ್ಟು ಲೀಲಾಕ್ರಿಯೆಗಳಿಂದ ಅರ್ಚಿಸಿ ಶಿವೋಹಂ ಎಂದು ಮಂತ್ರೋಚ್ಚಾರಣೆ ಮಾಡುತ್ತಲಿರುವುದನ್ನು ಉಪಮಿಸಲಾಗದು.

# ಸಂಪಾದಕೀಯ

## ಗಾಂಧಿ ಜಯಂತಿ

ಗಾಂಧೀಜಿಯಿಂದ ನಾವು ಕಲಿಯ ಬೇಕಾದುದನ್ನೆಲ್ಲಾ ಗಾಳಿಗೆ ತೂರಿದ್ದೇವೆ. ಆ ಪುಣ್ಯಾತ್ಮನ ಹೆಸರನ್ನು ಸ್ಮರಿಸಲೂ ಅರ್ಹತೆಯನ್ನು ಕಳೆದುಕೊಂಡು ಬಾಳುತ್ತಿದ್ದೇವೆ; ಮೌಲ್ಯಗಳಿಗೆ ಸಂಬಂಧವೇ ಇಲ್ಲದಂತೆ ಜೀವಿಸಿದ್ದೇವೆ. ಗಾಂಧಿ ಎಂಬ ಹೆಸರನ್ನು ಉಚ್ಚರಿಸಲೂ ಸಂಕೋಚಪಡುತ್ತಿದ್ದಾರೆ ಗಾಂಧಿಜಿಯವರೊಂದಿಗೆ ಬಾಳಿದ ಹಿರಿಯರು. ಬಾಪುವೆಂದೇ ಸ್ಮರಿಸುತ್ತ ಸಂತೋಷಪಡುತ್ತಿದ್ದಾರೆ ಆ ಹಿರಿಯರು ನೈತಿಕ ಆಧಾರದ ಮೇಲೆ ರಾಜಕೀಯವನ್ನು ಕಟ್ಟಲಾಶಿಸಿದವರು ಗಾಂಧೀಜಿ, ನೀತಿಯನ್ನು ಕಡೆಗಣಿಸಿ ಬದುಕುವುದೇ ಇಂದು ಮಾದರಿಯಾಗುತ್ತಿದೆ. ದೊಡ್ಡವರ ಹೆಸರಿನಲ್ಲಿ ಮಾಡ ಬಾರದ್ದನ್ನು ಮಾಡುತ್ತಿದ್ದೇವೆ; ಹೇಳಬಾರದ್ದನ್ನು ಹೇಳುತ್ತಿದ್ದೇವೆ. ಒಂದೇ ಉದಾಹರಣೆ-ಪಾನನಿರೋಧವನ್ನು ಜಾರಿಗೆ ತರಬೇಕೆಂದು ಗಾಂಧೀಜಿ ಸಂಕಲ್ಪ ಬದ್ಧರಾಗಿದ್ದರು. ಇಂದು ರಾಷ್ಟ್ರ ನೀತಿಗಳು ರೂಪಿತವಾಗುವುದೇ ಕವಾಟಗಳಲ್ಲಿ. ಪಾನ ಸಂಭ್ರಮದ ಮುಖಂಡರು ನಾಯಕರು, ಅಧಿಕಾರಿಗಳು, ಅಧ್ಯಾಪಕ ಪ್ರಾಧ್ಯಾಪಕರು, ವೈದ್ಯರು, ವಕೀಲರು, ವಿದ್ಯಾರ್ಥಿಗಳು, ವಿದ್ಯಾರ್ಥಿನಿಯರು, ಗ್ರಾಮೀಣ ಅಕ್ಷರಸ್ಥ ಅನಕ್ಷರಸ್ಥರು, ಕೆಲವು ಕಾವಿಧಾರಿಗಳೂ ಸಹ ಕುಡಿತವನ್ನು ಪ್ರತಿಷ್ಠೆಯ ಸಂಕೇತವನ್ನಾಗಿಸಿಕೊಂಡಿದ್ದಾರೆ. ರಾಷ್ಟ್ರದ ಯುವಜನಾಂಗ ಕುಡಿತದ ಪಿಡುಗಿಗೆ ದಾಸರಾಗಿ ಭವಿಷ್ಯಕ್ಕೆ ಹೊರೆಯಾಗುತ್ತಿದ್ದಾರೆ. ಹಲವು ಹನ್ನೊಂದು ಸಾಮಾಜಿಕ ರೋಗರುಜಿನಗಳಿಗೆ ನಾಂದಿಯಾಗುತ್ತಿದ್ದಾರೆ. "ಬೆತ್ತಲೆಯಿದ್ದವರ ಊರಲ್ಲಿ ಬಟ್ಟೆ ತೊಟ್ಟವನೆ ಮೂರ್ಖ" ಎಂಬಂತಾಗಿದೆ ಸ್ವಾತಿಕರ, ಸಂಭಾವಿಕರ ಪರಿಸ್ಥಿತಿ ಕುಡಿಯದವನಿಂದು ನಾಗರಿಕ ಸಮಾಜದ ಕಣ್ಣಿನಲ್ಲಿ ಮಾರುಕದ ವಸ್ತು-ವಾಗಿದ್ದಾನೆ. ಬುದ್ಧಿಜೀವಿಗಳಂತೂ ಕುಡಿತವನ್ನು ಗೌರವಾದರಗಳಿಂದ ಭಕ್ತಿ-ವಿಶ್ವಾಸಗಳಿಂದ ಕಾಣುತ್ತ ನಡೆದಿರುವುದು ನಿಜಕ್ಕೂ ಶೋಚನೀಯ. ಗಾಂಧೀಜಿಯ ಬಗ್ಗೆ ಪ್ರಬುದ್ಧ, ವಿದ್ವತ್ಪೂರ್ಣ ಉಪನ್ಯಾಸ ಮಾಡುವ ಬುದ್ಧಿಜೀವಿ ಕುಡಿದೇ ವೇದಿಕೆ ಯೇರುವ ಅಥವಾ ವೇದಿಕೆ ಇಳಿದಮೇಲೆ ಕುಡಿದು ಆನಂದಿಸುವ ಉದಾಹರಣೆಗಳು ಇಂದು ಸಾಮಾನ್ಯ ಸಂಗತಿ. ವೈದ್ಯರ ಸಲಹೆಯ ಸೋಗಿನಲ್ಲಿ ಸ್ನೇಹದ ಹೆಸರಿನಲ್ಲಿ ಸ್ಥಾನದ ಮಾನದ ಆಶ್ರಯದಲ್ಲಿ ಕುಡಿತ ವಿಜೃಂಭಿಸಿದೆ. ಊರುಕೇರಿಗಳ ತುಂಬ ಶಾಲಾಕಾಲೇಜಗಳ ಆಜು ಬಾಜಿನಲ್ಲಿ, ದೇವಾಲಯ ಚರ್ಚ್, ಮಸೀದಿಗಳ ಅಕ್ಕ ಪಕ್ಕಗಳಲ್ಲಿ, ಕಣ್ ಕೋರೈಸುವ ಬೆಳಕಿನಲಂಕಾರದಲ್ಲಿ 'ಬಾರ್'ಗಳಿಂದು ಉತ್ಸವಾ-ಚರಣೆ ನಡೆಸಿವೆ. ಮೂರು ವರ್ಷದ ಮಗುವಿಂದು ರಮ್, ಬ್ರಾಂದಿ, ವಿಸ್ಕಿಗಳ ಮಾಹಿತಿ ಕೊಡುವಂತೆ ಪರಿಸರ ಕುಡಿತಮಯವಾಗಿದೆ. ಗಾಂಧಿ ದೇಶದವರಾದ ನಮಗಿಂದು ನಾಚಿಕೆ ಎಂಬುದಿದೆಯೆ? ಇದರ ಘೋರ ದುರಂತವನ್ನು ಊಹಿಸಿರುವ ಮಠಾಧಿಪತಿಗಳು ಆಂದೋಳನವನ್ನೇ ಮಾಡುವಂಥ ಪರಿಸ್ಥಿತಿಗೆ ಬಂದಿದ್ದೇವೆ. ಧರ್ಮಭೂಮಿ, ಪುಣ್ಯಭೂಮಿ, ಭರತಖಂಡದಲ್ಲಿಂದು ಪಾನ ಪ್ರವಾಹ ಬಂದಿದೆ. ನಾವು ಗಾಂಧೀಜಯಂತಿಯನ್ನಾಚರಿಸುತ್ತಿದ್ದೇವೆ! ಇದಲ್ಲವೆ ನಾಟಕ!

---

# ಕರ್ನಾಟಕ ಸರ್ಕಾರ

## ಕರ್ನಾಟಕ ರಾಜ್ಯೋತ್ಸವ ಶುಭಾಶಯಗಳು

ಕರ್ನಾಟಕ ಎಂಬುದು ಒಂದು ಬರಿಯ ಹೆಸರಲ್ಲ ಕರ್ನಾಟಕ ಎಂದೊಡನೆಯೇ ಒಬ್ಬೊಬ್ಬರಲ್ಲಿ ಒಂದೊಂದು ಭಾವನೆ ಸ್ಫುರಿಸುವುದು ಸಹಜ ಕರ್ನಾಟಕದ ಇತಿಹಾಸ ಸುದೀರ್ಘವಾದುದು. ಇದು ಶಂಕರಾಚಾರ್ಯ, ಬಸವಣ್ಣ, ಮಧ್ವಾಚಾರ್ಯ, ರಾಮಾನುಜಾಚಾರ್ಯ ಮತ್ತಿತರ ಮಹಾಮಹಿಮರ ಬೀಡು. ದೇಶದಾದ್ಯಂತ ಪಸರಿಸಿರುವ ಅವರ ಸಂದೇಶಗಳು ಇಂದಿಗೂ ಮಾನ್ಯವಾಗಿವೆ. ಚಾಲುಕ್ಯ ಹೊಯ್ಸಳ ಹಾಗೂ ವಿಜಯನಗರಗಳಂತಹ ಮಹೋನ್ನತ ಸಾಮ್ರಾಜ್ಯಗಳು ಇಲ್ಲಿಉದಿಸಿ ದೇಶದ ನಾಗರೀಕತೆ ಹಾಗೂ ಸಾಂಸ್ಕೃತಿಕ ಪರಂಪರೆಗಳ ಮೇಲೆ ತಮ್ಮ ಅಚ್ಚಳಿಯದ ಪ್ರಭಾವವನ್ನು ಬೀರಿವೆ. ಜೀವನದಿಗಳಾದ ಕಾವೇರಿ, ಕೃಷ್ಣ ಹಾಗೂ ತುಂಗ ಭದ್ರೆಯರುಜನಜೀವನಕ್ಕೆ ನೆಮ್ಮದಿತಂದಿವೆ. ಪ್ರಕೃತಿ ಕರುಣಿಸಿದಾಗ ಸೌಂದರ್ಯದ ಬೀಡು-ಕರ್ನಾಟಕ. ಇಲ್ಲಿನ ಗಂಧದ ಸುವಾಸನೆ ಹಾಗೂ ರೇಷ್ಮೆಯಹೊಳಪು ವಿಶ್ವಪ್ರಸಿದ್ಧ ಪಡೆದಿದೆ. ರಾಜ್ಯದ ಜನರು ಮೃದು ಸ್ವಭಾವಿಗಳು ಹಾಗೂ ಸಂಯಮಶೀಲರು, ದೇಶದ ಅತ್ಯಂತ ಪ್ರಾಚೀನ ಭಾಷೆಗಳಲ್ಲೊಂದಾದ ಕನ್ನಡ ಭಾಷೆಯೊಂದಿಗೆ ತುಳು. ಕೊಂಕಣಿ ಹಾಗೂ ಕೊಡವ ಭಾಷಾ ಸಂಪತ್ತು -ರಾಜ್ಯದ ಹಿರಿಮೆಯಾಗಿದೆ.

ಮೈಸೂರಿನ ಒಡೆಯರ ಆಳ್ವಿಕೆಯಲ್ಲಿ ಅತ್ಯುತ್ತಮವಾದ ಆಡಳಿತ ಪದ್ಧತಿ ಅನುಷ್ಠಾನಕ್ಕೆ ಬಂದಿತು. ಇಂತಹ ಉತ್ತಮ ವಾತಾವರಣದಲ್ಲಿ ಸರ್. ಎಂ. ವಿಶ್ವೇಶ್ವರಯ್ಯನವರು ರಾಜ್ಯವನ್ನು ತಾಂತ್ರಿಕ ಸಾಧನೆಯ ಶಿಖರಕ್ಕೆ ಕೊಂಡೊಯ್ದರು. 1956ರ ನವಂಬರ್ ಒಂದರಂದು ರಾಜ್ಯ ಪುನರ್ ವಿಂಗಡಣೆಯಾದ ನಂತರ, ಕರ್ನಾಟಕ ವಿವಿಧ ಕ್ಷೇತ್ರಗಳಲ್ಲಿ ಗಣನೀಯ ಪ್ರಗತಿ ಸಾಧಿಸಿದೆ. ಕುಡಿಯುವ ನೀರಿನ ಪೂರೈಕೆ ಹಾಗೂ ವಿದ್ಯುತ್‌ಚ್ಛಕ್ತಿ ಸೌಲಭ್ಯ ರಾಜ್ಯದ ಎಲ್ಲಾ ಹಳ್ಳಿಗಳಿಗೂ ದೊರೆತಿದೆ. ಆರೋಗ್ಯ, ವಯಸ್ಕರ ಶಿಕ್ಷಣ, ಕೃಷಿ, ಕೈಗಾರಿಕೆ, ಪರಿಸರ ಸಂರಕ್ಷಣೆ. ಪರಿಶಿಷ್ಟ ಜಾತಿ ಹಾಗೂ ಬುಡಕಟ್ಟು ಜನಾಂಗ ಮತ್ತು ಇತರ ಹಿಂದುಳಿದ ವರ್ಗಗಳಅಭಿವೃದ್ಧಿಗೆ ಹಲವು ವಿಶಿಷ್ಟ ಯೋಜನೆ ಗಳನ್ನು ಕಾರ್ಯಗತಗೊಳಿಸಲಾಗುತ್ತಿದೆ. ದೇಶದ ಪ್ರಗತಿ ವಾಹಿನಿಗೆ ಕೊಡುಗೆ ನೀಡುತ್ತಿರುವ ಕರ್ನಾಟಕ ಹಲವು ವಿಧದಲ್ಲಿ ಒಂದು ಮಾದರಿ-ರಾಜ್ಯವಾಗಿದೆ.

ಕರ್ನಾಟಕ ರಾಜ್ಯೋತ್ಸವದ ಈ ಶುಭ ಸಂದರ್ಭದಲ್ಲಿ ಕರ್ನಾಟಕದ-ಸಮಸ್ತ ಜನರಿಗೂ ನನ್ನ ಹಾರ್ದಿಕ ಶುಭಾಶಯಗಳು. ಕರ್ನಾಟಕ ರಾಜ್ಯಮುಂಬರುವ ವರ್ಷಗಳಲ್ಲಿ ಇನ್ನೂ ಹೆಚ್ಚಿನ ಸಂಪದಭಿವೃದ್ಧಿ ಹೊಂದಲೆಂದು ಹಾರೈಸುತ್ತೇನೆ.

ಪಿ. ವೆಂಕಟಸುಬ್ಬಯ್ಯ
ರಾಜ್ಯಪಾಲರು.

'ಕರ್ನಾಟಕ ವಾರ್ತೆ'

# ದಿವ್ಯ ಸಂದೇಶ

ಸಂಕಲನ :- ಶ್ರೀ ವೀರಚಂದ ನಾರಾಣಜಿ ಕಾನಜಿ.

ಜಗಳಾಡುವ ಮನುಜ ಪಶುಸಮಾನರು,
ಹೆಚ್ಚಿಗೇನು ಹೇಳಲಿ ಇವರಿಗೆ ನಾನು.

ಅರಿವು ಕಳೆದುಕೊಂಡಾಗ ಮನುಜ,
ಕಾದಾಟ-ಅಶಾಂತಿಗಳಿಂದ ತುಂಬುವದು ಸಮಾಜ.

ನುಡಿದಂತೆ ನಡೆದರೆ ಸಿಗುವದು,
ಜಗತ್ತಿನಲ್ಲಿ ಗೌರವಪೂರ್ಣ ಮನ್ನಣೆಯು.

ಕೋಗಿಲೆ-ಕಾಗೆ ನೋಡಲು ಒಂದೇ,
ಮಾತಿನಲ್ಲಿ ಕಾಣದು ಬಗೆ ಒಂದೇ.

ದ್ವೇಷ ಸಾಧಿಸಿ ಯಾರೂ ಸುಖ ಪಟ್ಟಿಲ್ಲ,
ವಿಚಾರ ಮಾಡಿ ನೋಡು ಹಿಂದಿನ ಇತಿಹಾಸ.

ಅಂಗಳದಿ ಬೇವಿನ ಗಿಡ ನೆಟ್ಟು,
ಸಿಗುವದು ಹೇಗೆ ಮಾವಿನ ರುಚಿ.

ಎಲ್ಲ ಧರ್ಮಗಳು ಸಾರುವವು ಒಂದೇ ಮಾತು,
ಜಗಳ ಇದ್ದಲ್ಲಿ ಇರುವುದಿಲ್ಲ ಧರ್ಮದ ತಿರುಳು.

ಸತ್ಯ, ಪ್ರೇಮ ಶಾಂತಿಯೇ ಜೀವನಕ್ಕೆ ಆಧಾರ,
ಎಲ್ಲ ಸುಖಕ್ಕೆ ಈ ಧರ್ಮ ಒಂದೇ ಆಧಾರ.



# ಉಪನಿಷತ್ತಿನ ಮಹತ್ವ ಮತ್ತು ಅದರ ಪ್ರಭಾವ

ಲೇಖಕರು : ಶ್ರೀ ಪಿ. ಕೆ. ಬಂಗೇರ; ಸಿದ್ಧಾಂತ ಶಾಸ್ತ್ರೀ, ಮುಂಬಯಿ.

ವಿಶ್ವದ ಮಾನವ ಸಮಾಜಕ್ಕೆ ಸೃಷ್ಟಿಯ ಆದಿಯಲ್ಲಿ ಪರಮಾತ್ಮನಿಂದ ಕೊಡಲ್ಪಟ್ಟ ಜ್ಞಾನದ ಜ್ಯೋತಿಯೇ ವೇದ. ಅಂತಹ ವೇದದ ಸಾರಗರ್ಭಿತ ಭಾಗವೇ ಉಪನಿಷತ್ತಾಗಿರುತ್ತದೆ. ಅದರ ಸಿದ್ಧಾಂತವು ಅತ್ಯಂತ ಗೂಢ ಹಾಗೂ ಸಾರ್ವಭೌಮವೆನಿಸಲ್ಪಟ್ಟಿದೆ. ಯಾವ ದೇಶದ ನಿವಾಸಿಯಾಗಿರಲಿ; ಯಾವ ಧರ್ಮದ ಅನುಯಾಯಿಯಾಗಿರಲಿ; ಯಾವ ಮತದ ಅನುಗಾಮಿಯೇ ಆಗಿದ್ದರೂ ಕೂಡ ಆಧ್ಯಾತ್ಮಿಕ ಜ್ಞಾನ-ಪಿಪಾಸೆಯಿಂದ ಹಂಬಲಿಸುವವರ ತೃಷೆಯನ್ನು ಉಪನಿಷತ್ತು ತೃಪ್ತಿಗೊಳಿಸುತ್ತದೆಂಬುದಕ್ಕೆ ಸಂದೇಹವಿಲ್ಲ. ಆದರಲ್ಲಿ ಪರಮಾತ್ಮ, ಆತನ ಸ್ವರೂಪ, ಜೀವಾತ್ಮನ ನಿಜರೂಪ, ಬ್ರಹ್ಮ ಸಾಕ್ಷಾತ್ಕಾರದ ಉಪಾಯ ಅನಂತರದ ಜೀವಾತ್ಮನ ಸ್ಥಿತಿ ಇತ್ಯಾದಿ ವಿಷಯಗಳ ವಿವರಣೆಗಳನ್ನು ಸ್ಪಷ್ಟೀಕರಿಸಲಾಗಿದೆ. ವಿದೇಶದ ವಿದ್ವಾಂಸರು ಉಪನಿಷತ್ತಿನಲ್ಲಿರುವ ಪ್ರಶ್ನೋತ್ತರಿಗಳನ್ನು ಕಂಡು ಆಶ್ಚರ್ಯಚಕಿತರಾಗಿದ್ದಾರೆ. ಯಾಕೆಂದರೆ ಆ ರೀತಿಯ ಪ್ರಶ್ನೆಗಳ ಉತ್ತರವು ಮತ್ಯಾವ ಧರ್ಮಗ್ರಂಥದಲ್ಲಾಗಲೀ ಅವರು ಕಂಡದ್ದಿಲ್ಲ. ಒಂದು ವೇಳೆ ಕಂಡಿದ್ದರೂ ಅದು ಅಸಂತೋಷಕರ, ಅಪೂರ್ಣ; ಸಂದಿಗ್ಧ ! ಸಮಸ್ತ ಸಂಶಯ ನಿವೃತ್ತಿರೂಪದ ಉತ್ತರವು ವೇದಾಂತ ದರ್ಶನದ ಹೊರತು ಅನ್ಯತ್ರ ದುರ್ಲಭವೇ ಅಲ್ಲ ನಾಸ್ತಿ ! ಉದಾಹರಣೆಗಾಗಿ : ಬ್ರಹ್ಮ ಅಥವಾ ಈಶ್ವರನ ಸ್ವರೂಪ ಹೇಗೆ? ಜೀವಾತ್ಮ ಯಾವ ತತ್ತ್ವದಿಂದ ಉಂಟಾದದ್ದು ? ಜಗತ್ತಿನ ಉತ್ಪತ್ತಿ ಯಾವ ಪದಾರ್ಥದಿಂದ ಹೇಗಾಯಿತು ? ಜೀವಾತ್ಮನು ಸ್ವರ್ಗ ಅಥವಾ ನರಕದ ಸ್ಥಿತಿಯಲ್ಲಿ ಎಷ್ಟು ಕಾಲವಿರುತ್ತಾನೆ? ಅನಂತರ ಏನಾಗುತ್ತಾನೆ ? ದೇಹದ ರಚನೆಯ ಮೊದಲು ದೇಹಿಯ ಅಸ್ತಿತ್ವವಿರುತ್ತದೋ ? ಇಲ್ಲವೋ ? ಇದ್ದರೆ ಯಾವ ಸ್ಥಿತಿಯಲ್ಲಿ ? ಕೆಲವರು ಜನ್ಮದಿಂದಲೇ ಸುಖಿ. ಕೆಲವರು ಜನ್ಮದಾರಭ್ಯದಿಂದಲೇ ಸುಖಿಗಳಾಗಿರಲು ಕಾರಣವೇನು ? ಇತ್ಯಾದಿ ಅನೇಕ ಪ್ರಶ್ನೆಗಳು ಸೂಕ್ಷ್ಮ ದೃಷ್ಟಿಯಿಂದ ದರ್ಶನ ಶಾಸ್ತ್ರದ ಅಧ್ಯಯನ ಮಾಡುವ ಪ್ರತ್ಯೇಕ ವ್ಯಕ್ತಿಯ ಮನಸ್ಸಿನಲ್ಲಿ ಉತ್ಪತ್ತಿಯಾಗುವುದು ಸ್ವಾಭಾವಿಕ. ಇಂತಹ ರಹಸ್ಯಮಯ ಪ್ರಶ್ನೆಗಳಿಗೆ ವೇದಾಂತವು ಸಂಪೂರ್ಣ ವೈಜ್ಞಾನಿಕ ರೂಪದಿಂದ ಸರ್ವಸಂದೇಹ ನಿವೃತ್ತಿಯಾಗುವ ಉತ್ತರವಿತ್ತು, ಪ್ರತಿಯೊಬ್ಬ ಜಿಜ್ಞಾಸುವಿನ ಮನಸ್ಸನ್ನು ಮುಗ್ಧಗೊಳಿಸುವುದರಿಂದ ಅದರ ಪ್ರಭಾವಕ್ಕೆ ಎಲ್ಲರೂ ಆಕರ್ಷಿಸಲ್ಪಡುತ್ತಾರೆ.

ಸರ್ವ ಪ್ರಥಮ ಆರ್ಯಜಾತಿಯನ್ನುಳಿದು ಅನ್ಯಮತದವರು ಉಪನಿಷತ್ತಿನ ಪ್ರಭಾವದಿಂದ ಆಕರ್ಷಿಸಲ್ಪಟ್ಟಿದ್ದರೆ ಅದು ಅರಬದೇಶದ ವಿದ್ವಾಂಸ ಅಲಬೇರುನಿ ಯಿಂಡ. ಆತನು ಹನ್ನೊಂದನೆಯ ಶತಮಾನದಲ್ಲಿ ಭಾರತಕ್ಕೆ ಬಂದು ಅಧ್ಯಯನ ಮಾಡಿ ಕಡೆಗೆ ಅಧಿಕಾಂಶದಿಂದ ಉಪನಿಷತ್ತುಗಳ ಸಾರಸ್ವರೂಪವಾದ, ಪ್ರಸ್ಥಾನತ್ರ ಯದಲ್ಲಿ ಒಂದಾದ ಭಗವದ್ಗೀತೆಗೆ ಮರುಳಾಗಿ ಹೋದನು. ಆತನು ಮಾಡಿರುವ ಗೀತೆಯ ಗುಣಗಾನವೆಂದರೆ ಅದು ಉಪನಿಷತ್ತಿನ ಪ್ರಶಂಸೆಯೆಂದೇ ತಿಳಯ್ಯಬೇಕು. ಆ ನಂತರ ಉಪನಿಷತ್ತಿನ ಪ್ರಭಾವದಿಂದ ಆಕರ್ಷಿಸಲ್ಪಟ್ಟಿದ್ದರೆ ದಿಲ್ಲಿಯ ಮುಗಲ್ ಸಾಮ್ರಾಟ ಶಾಹಜಾನನ ಜ್ಯೇಷ್ಠ ಪುತ್ರನಾದ ದಾರಾಶಿಕೋಹ. ಪ್ರಭುಭಕ್ತನಾದ ಆತನು ಒಳ್ಳೆಯ ವಿದ್ವಾಂಸನಾಗಿದ್ದುದರಿಂದ ನಿಷ್ಪಕ್ಷ ದೃಷ್ಟಿಯಿಂದ ಎಲ್ಲಾ ಮತದವರ ಧರ್ಮ ಗ್ರಂಥಗಳನ್ನು ಪ್ರೇಮಪೂರ್ವಕ ಸ್ವಾಧ್ಯಾಯ ಮಾಡುವ ಅಭಿರುಚಿಯುಳ್ಳವ ನಾಗಿದ್ದನು. ಆ ಕಾಲದ ಸಂಪ್ರದಾಯಗಳ ಸಂಕುಚಿತ ಮನೋವೃತ್ತಿಗಳು ಆತನ ಮನಸ್ಸಿಗೆ ಸಲ್ಲದಾಗಿತ್ತು. ಒಂದೇ ಒಂದಾದ ಮನುಷ್ಯ ಸಮಾಜದಲ್ಲಿ ಈ ರೀತಿಯ ಭೇದ-ಭಾವಗಳು ಉಂಟಾಗಲಿಕ್ಕೆ ಕಾರಣವೇನೆಂಬುದನ್ನು ವಿಚಾರಮಾಡಿದಾಗ ವಿವಿಧ ಮತಗಳಿಗೆ ಉತ್ತೇರಣೆಯನ್ನೀಯುವುದೇ ಅವರವರ ಧರ್ಮಗ್ರಂಥಗಳು. ಹಾಗಾದರೆ ಆವಾವ ಮತ-ಧರ್ಮ-ಗ್ರಂಥಗಳ ರಹಸ್ಯಗಳನ್ನು ತಿಳಿದುಕೊಳ್ಳದ ಹೊರತು ಸರ್ವ ಧರ್ಮ ಸಮನ್ವಯದ ಪ್ರಚಾರವು ಸಾಧ್ಯವಿಲ್ಲವೆಂದರಿತ ಆತನು ಕುರಾನ್, ಬೈಬಲ್, ತೌರೇತ್, ಇಂಜೀಲ್, ಜಬೂರ್ ಇತ್ಯಾದಿ ಪುಸ್ತಕಗಳನ್ನು ಬಹಳ- ಶ್ರದ್ಧೆಯಿಂದ ಓದಲಾರಂಭಿಸಿದನು. ಯಾಕೆಂದರೆ ಇವೆಲ್ಲಾ ಧರ್ಮ ಗ್ರಂಥಗಳು. "ಅಸ್ಮಾನಿ ಪುಸ್ತಕ" ಆಕಾಶದಿಂದ ಪರಮಾತ್ಮನ ಮೂಲಕ ಬಂದಿರುವುದೆಂಬ ವಿಶ್ವಾಸ ಅವನದ್ದಾಗಿತ್ತು. ಆದರೆ ಅವುಗಳ ಸ್ವಾಧ್ಯಾಯ ಮಾಡುತ್ತಾಹೋದಂತೆ ಆತನ ಮನಸ್ಸು ವಿಶಾಲವಾಗುತ್ತಾ ಹೋಯಿತು. ಆಗಿನ ಕಾಲದಲ್ಲಿ ಮುಖ್ಯವಾಗಿ ಹಿಂದು ಮತ್ತು ಮುಸಲ್ಮಾನರೆಂಬ ಇವೆರಡು ಮತಗಳು ಪರಸ್ಪರ ಬಹಳ ವಿರೋಧವಾಗಿದ್ದುವು. ಇವರೊಳಗಿನ ವೈಮನಸ್ಯತೆಗಳನ್ನು ಹೋಗಲಾಡಿಸಿ ಉಭಯ ಮತದಲ್ಲೂ ಐಕ್ಯತೆ ಯುಂಟಾಗುವಂತೆ ಆತನು ಪಾರ್ಸಿ ಭಾಷೆಯಲ್ಲಿ "ಮಜಮಾ-ಉಲ್-ಬಹರಾಯಿನ್" ಹೆಸರಿನ ಒಂದು ಗ್ರಂಥವನ್ನು ಬರೆದಿರುವನು. ಅದು ಎಸಿಯಾಟಿಕ್ ಸೊಸಾಯಿಟಿ ಬಂಗಾಲ ದ್ವಾರಾ ಕಲ್ಕತದಲ್ಲಿ ೧೯೨೯ ನೆಯ ಇಸವಿಯಲ್ಲಿ ಪ್ರಕಾಶನವಾಗಿದೆ.

ಕ್ರಮೇಣ ಆತನ ಮನಸ್ಸು ಪರಮಾತ್ಮನ ಅಸ್ತಿತ್ವದ ಅರಿವಿನ ಕಡೆಗೆ ಹಾತೊರೆ ಯಲಾರಂಭಿಸಿದುದರಿಂದ ಮೊದಲಿನ ಸ್ವಾಧ್ಯಾಯದ ಪುಸ್ತಕಗಳಿಂದ ಅವನಿಗೆ ಸಮಾ ಧಾನವಾಗಲಿಲ್ಲ. ಆ ಮೇಲೆ ಆತನು ಓದುವ ಅಭಿಲಾಷೆಯನ್ನುಳಿದು ಸಾಧು-ಸಂತ ರಲ್ಲಿ ಪರಮಾತ್ಮನ ವಿಷಯವಾಗಿ ಚರ್ಚಿಸಲಿಕ್ಕೆ ಪ್ರಾರಂಭಿಸಿದನು. ಕಡೆಗೆ ಆತನು



೧೬೪೦ ನೇ ಇಸವಿಯಲ್ಲಿ ದಿಲ್ಲಿಯಿಂದ ಕಾಶ್ಮೀರಕ್ಕೆ ಹೋಗಿ ಅಲ್ಲಿಯ ಕೆಲವು ವಿದ್ವಾಂ ಸರಲ್ಲಿ ಅವನ ಸಂದೇಹ ನಿವೃತ್ತಿಯ ಬಗ್ಗೆ ಪ್ರಶ್ನೆ ಕೇಳಿದರೂ ಅವನಿಗೆ ಸಮರ್ಪಕ ವಾದ ಉತ್ತರ ದೊರೆಯಲಿಲ್ಲ. ತತ್ಸಂಬಂಧದ ಸಮಾಧಾನಗೊಳಿಸುವ ಅನುಭವಿಬ್ರಾಹ್ಮ ಣರು ಕಾಶಿಯಲ್ಲಿದ್ದಾರೆಂಬುದನ್ನು ಯಾರೋ ಹೇಳಿದ್ದನ್ನು ಕೇಳಿದ ರಾಜಕುಮಾರನು ಕಾಶ್ಮೀರಿನಿಂದ ಬನಾರಸಿಗೆ ಬಂದನು. ಕಾಶಿಯ ವಿದ್ವಾಂಸರಿಂದ ಆತನು ಉಪನಿಷತ್ತು ಗಳನ್ನು ಓದಿಸಿ ಕೇಳುವುದಕ್ಕೆ ಪ್ರಾರಂಭಿಸಿದನು. ಉಪನಿಷತ್ತಿನ ಶ್ರವಣದಿಂದ ಅವನ ಮನಸ್ಸಿನ ಸಂದೇಹಗಳೆಲ್ಲಾ ನಿವೃತ್ತಿಯಾಗಿ ಅತ್ಯಂತ ಮಹದಾನಂದವಾದ ಉಲ್ಲಾಸ ವುಂಟಾಗುವದಾಯಿತು. ಇಷ್ಟೊಂದು ಮಹತ್ತರವಾದ ಗ್ರಂಥಗಳನ್ನು ಇನ್ನೊಬ್ಬರಿಂದ ಓದಿಸಿ ಕೇಳುವ ಬದಲಾಗಿ ಸ್ವತಃ ಓದಿ ತಿಳಿಯಬೇಕೆಂಬ ಇಚ್ಛೆಯಿಂದ ಆತನು ಸಂಸ್ಕೃತ ಕಲಿಯುವ ನಿರ್ಧಾರ ಮಾಡಿದನು ಆದರೆ ಇದು ಇಂದಿಗಿಂತ ೩೩೭ ವರ್ಷಗಳ ಮೊದಲಿನ ಮಾತು. ಆಗಿನ ಕಾಲದ ವಿದ್ವಾಂಸರೆಲ್ಲರೂ ಮ್ಲೇಚ್ಛನಾಗಿರುವ ನಿನಗೆ ಸಂಸ್ಕೃತ ಕಲಿಸುವುದಿಲ್ಲವೆಂದು ನಿರಾಕರಿಸಿದರು. ಅಷ್ಟಕ್ಕೆ ನಿರಾಶೆಗೊಂಡ ದಾರಾಶಿಕೋ- ಹನು ಕಾಶಿಯಿಂದ ಲಾಹೋರಿಗೆ ಹೋಗಿ ಅಲ್ಲಿ ರಾವೀನದಿಯ ತೀರದಲ್ಲಿ ತಿರುಗಾಡು ತ್ತಿರುವಾಗ ಒಂದು ದಿನ ಲಾಲ್‌ದಾಸ್ ಹೆಸರಿನ ಒಬ್ಬ ಸಂನ್ಯಾಸಿ ಅವನ ಚಿಂತೆಯ ಕಾರಣ ಕೇಳಿದಾಗ ಪರಿಸ್ಥಿತಿಯನ್ನೆಲ್ಲಾ ಆ ಸಂನ್ಯಾಸಿಗೆ ತಿಳಿಸಿದನು. ಇಷ್ಟಕ್ಕಾಗಿ ನೀನು ಚಿಂತಿಸುವ ಅಗತ್ಯವಿಲ್ಲ: ನಿನಗೆ ಸಂಸ್ಕೃತವನ್ನು ನಾನು ಕಲಿಸುತ್ತೇನೆಂದುಹೇಳಿದ ಮೇರೆಗೆ ದಾರಾಶಿಕೋಹನು ಆ ಸಾದುವಿನ ಮೂಲಕ ಸಂಸ್ಕೃತದ ಅಭ್ಯಾಸಮಾಡಿ ಉಪನಿಷತ್ತುಗಳನ್ನು ಸ್ವಯಂ ಓದಲಾರಂಭಿಸಿದನು. ಹಾಗೆ ಸ್ವಾದ್ಯಾಯ ಮಾಡುತ್ತಾ ಹೋದಂತೆ ಅವನ ಜಿಜ್ಞಾಸೆಯ ಮನಸ್ಸಿನಲ್ಲಿ ನವೀನ ಜ್ಯೋತಿಯ ಪ್ರಾದುರ್ಭಾವ ವಾಯಿತು ಮನುಷ್ಯನ ಮನಸ್ಸಿಗೆ ಇಷ್ಟೊಂದು ಆಹ್ಲಾದವನ್ನೀಯತಕ್ಕ ಈ ಮಹತ್ವ ವಾದ ಗ್ರಂಥಗಳನ್ನು ಪಾರ್ಸಿಭಾಷೆಗೆ ಅನುವಾದ ಮಾಡಬೇಕೆಂಬ ನಿರ್ಧಾರಮಾಡಿ ತತ್ಸಂಬಂಧೆ ಪ್ರಯತ್ನ ಮಾಡಲಾರಂಭಿಸಿದನು; ೧೬೫೭ ನೇ ಇಸವಿ ತನಕ ೫೨ ಉಪನಿ ಷತ್ತುಗಳನ್ನು ಅನುವಾದಮಾಡಿ ಅದಕ್ಕೆ "ಸಿರ್ರೆ ಅಕಬರ್" ಯೆಂಬ ಹೆಸರಿಟ್ಟನು. ಇಲ್ಲಿ 'ಸಿರ್' ಅಂದರೆ ರಹಸ್ಯ: ಅಕಬರ್ ಅಂದರೆ ಎಲ್ಲಕ್ಕಿಂತ ದೊಡ್ಡದು. ಈ ರೀತಿಯಿಂದ ಸಿರ್ರೆ ಅಕಬರಿನ ಅರ್ಥವು "ಎಲ್ಲಕ್ಕಿಂತ ದೊಡ್ಡ ರಹಸ್ಯ" ಎಂದಾಗುತ್ತದೆ. ದಾರಾಶಿಕೋ ಹನ ಮನಸ್ಸಿನಲ್ಲಿ ಉಪನಿಷತ್ತುಗಳ ಸ್ವಾಧ್ಯಾಯ ಮಾಡುವ ಇಚ್ಛೆ ಹೇಗೆ ಉಂಟಾಯಿತು ಆತನು ಯಾವ ಉದ್ದೇಶದಿಂದ ಅದನ್ನು ಪಾರ್ಸಿ ಭಾಷೆಗೆ ಅನುವಾದ ಮಾಡಿದ? ಉಪನಿಷತ್ತುಗಳ ವಿಷಯದಲ್ಲಿ ಆತನ ಅಭಿಪ್ರಾಯವೇನಿತ್ತು? ಇತ್ಯಾದಿ ಪ್ರಶ್ನೆಗಳ ಉತ್ತರವನ್ನು ಆತನು ಸ್ವತಃ ಅನುವಾದದ ಭೂಮಿಕೆಯಲ್ಲಿ ಬರೆದಿರುತ್ತಾನೆ. ಅದರ ಮುಖ್ಯಾಂಶ ಹೀಗಿದೆ :-

“ನಾನು ಅಧ್ಯಾತ್ಮ ವಿದ್ಯೆಯ ಹಲವು ಗ್ರಂಥಗಳನ್ನು ಸ್ವಾಧ್ಯಾಯ ಮಾಡಿದೆ. ಆದರೆ ಆತ್ಮ-ಪರಮಾತ್ಮ ಸಂಬಂಧದ ಅನ್ವೇಷಣಾ ಪಿಪಾಸೆಯು ಕ್ಷಣ-ಕ್ಷಣಕ್ಕೂ ಹೆಚ್ಚುತ್ತಾ ಹೋಯಿತು. ದೊಡ್ಡ-ದೊಡ್ಡ ಸೂಕ್ಷ್ಮ ಸಮಸ್ಯೆಗಳು ಹಾಗೂ ಪ್ರಶ್ನೆಗಳು ಹೃದಯದಲ್ಲಿ ಉತ್ಪನ್ನವಾಗಲಾರಂಭಿಸಿದುವು. ಅವುಗಳ ಸಮಾಧಾನವು ಈಶ್ವರೀಯ ಜ್ಞಾನದ ಹೊರತು ಅಸಂಭವವಾಗಿತ್ತು : ನಾನು ಕುರಾನ್, ತೌರೇತ್, ಜಬೂರ್ ಇತ್ಯಾದಿ ಅನೇಕ ಗ್ರಂಥಗಳನ್ನು ಓದಿದೆ. ಅವುಗಳಲ್ಲಿ ಈಶ್ವರನ ವಿಷಯದ ವರ್ಣನೆಯು ಕೇವಲ ಸಂಕೇತ ಮಾತ್ರದಲ್ಲಿರುತ್ತದೆ. ಆದರಿಂದ ಮನಸ್ಸಿನ ತೃಷೆ ನಿವಾರಣೆಯಾಗಲಿಲ್ಲ. ಕಡೆಗೆ ಹಿಂದುಗಳ ಈಶ್ವರೀಯ ಪುಸ್ತಕದ ವಿಷಯ ಗೊತ್ತಾಯಿತು. ನನ್ನಲ್ಲಿ ಮೊದಲೇ ಬ್ರಹ್ಮಜ್ಞಾನ ಪ್ರಾಪ್ತಿಯ ಪ್ರವೃತ್ತಿ ಹೆಚ್ಚಾಗಿತ್ತು. ಇದರಿಂದಾಗಿ ನಾನು ಬ್ರಹ್ಮಜ್ಞಾನದ ಭಂಡರವೆನಿಸುವ ಉಪನಿಷತ್ತುಗಳ ಅನುವಾದ ಮಾಡುವುದಕ್ಕೆ ಪ್ರಾರಂಭಿಸಿದೆನು. ಉಪನಿಷತ್ತಿನ ಅಧ್ಯಯನವು ಆತ್ಮಕ್ಕೆ ಶಾಶ್ವತ ಶಾಂತಿ ಮತ್ತು ಆನಂದವನ್ನುಂಟು ಮಾಡುತ್ತದೆಂಬುದಕ್ಕೆ ಸಂದೇಹವಿಲ್ಲ. ಯಾಕೆಂದರೆ ಈ ಪುಸ್ತಕಗಳು ಅನಾದಿಯದ್ದಾಗಿರುತ್ತವೆ. ಈಶ್ವರೀಯ ಪುಸ್ತಕಗಳಲ್ಲಿ ಇದು ಅತ್ಯಂತ ಪ್ರಾಚೀನ! ಪರಮ ಸತ್ಯದ ಪ್ರವಾಹ !! ಬ್ರಹ್ಮಜ್ಞಾನದ ಮಹಾ ಸಮುದ್ರ !!!

ಇದು ಉಪನಿಷತ್ತಿನ ಪರವಾಗಿ ದಾರಶಿಕೋಹನಿತ್ತ ಅಭಿಪ್ರಾಯ. ಅವರಂಗಜೇಬನ ಮಗಳಾದ ಜೆಬುನ್ನಿಸಾಯೆಂಬುವಳು ತನ್ನ ದೊಡ್ಡಪ್ಪನವರು ಸದಾ ಆನಂದದ ಮದೋನ್ಮತ್ತಿಯಲ್ಲಿರುವುದನ್ನು ಕಂಡು ಒಂದು ದಿನ ಕೇಳುತ್ತಾಳೆ ಅಜ್ಜಾ! ನಿಮ್ಮಲ್ಲಿ ಈ ಆನಂದ ಪ್ರವೃತ್ತಿ ಹೇಗಾಯಿತು? ಎಲ್ಲಿಂದ ಬಂತು? ಉತ್ತರ ಸಿಗುತ್ತದೆ ಉಪನಿಷತ್ತುಗಳ ಅಧ್ಯಯನದಿಂದ, ಪುನಃ ಪ್ರಶ್ನೆ: ಉಪನಿಷತ್ತುಗಳೆಂದರೇನು ? ಆಗ ಶಿಕೋಹನು ತಾನು ಪಾರ್ಸಿ ಭಾಷೆಯಲ್ಲಿ ಅನುವಾದ ಮಾಡಿರುವ ಉಪನಿಷತ್ತುಗಳನ್ನು ಒಂದೊಂದಾಗಿ ಆಕೆಗೆ ಓದಿಹೇಳುತ್ತಾನೆ. ರಾಜಕುಮಾರಿಯಾದ ಜೆಬುನ್ನಿಸಾ ಕೆಲವು ದಿನಗಳವರೆಗೆ ತನ್ನ ದೊಡ್ಡಪ್ಪನ ಮೂಲಕ ಅಮೃತ ರೂಪಿ ಉಪನಿಷತ್ತುಗಳ ಉಪದೇಶ ಶ್ರವಣ ಮಾಡುತ್ತಿದ್ದಳು. ಕಡೆಗೆ ಆಕೆಯ ಮನಸ್ಸಿಗೂ ಪ್ರತ್ಯಕ್ಷ ತೋರುವ ಪ್ರಪಂಚದ ವಾಸ್ತವಿಕತೆಯ ಅರಿವುಂಟಾಯಿತು. ತಾನು ಮೊದಲು ಅತ್ಯಂತ ಪ್ರೇಮದಿಂದ ತನ್ನದೆಂದುಕೊಂಡು ಪ್ರೀತಿಸುತ್ತಿರುವ ಭೌತಿಕ ವಸ್ತುಗಳನ್ನೆಲ್ಲಾ ನಿರಾಕರಿಸುತ್ತಾ ಬರುತ್ತಿರುವುದನ್ನು ಕಂಡ ಸಖಿಯರೆಲ್ಲರೂ ಆಶ್ಚರ್ಯಪಟ್ಟರು. ಅವರಂಗಜೇಬನು ರಾಜನಾಗಿದ್ದುದರಿಂದ ದೇಶ-ವಿದೇಶಗಳಿಂದ ವಿಶೇಷ ವಸ್ತುಗಳು ಬಹುಮಾನವಾಗಿ ಬರುತ್ತಿದ್ದವು. ಅದರಂತೆ ಚೀನಾ ದೇಶದ ವ್ಯಾಪಾರಿಯೊಬ್ಬನು ತನ್ನ ದೇಶದಲ್ಲಿ ತಯಾರಿಸಿರುವ ಬಹಳ ಸುಂದರವಾದ ಒಂದು ಕನ್ನಡಿಯನ್ನು ತಂದು ರಾಜನಿಗೆ ಒಪ್ಪಿಸಿದನು. ಅದನ್ನು ಆತನು ತನ್ನ ಮಗಳಿಗಾಗಿ ಅಂತಃಪುರಕ್ಕೆ ಕಳುಹಿಸಿಕೊಟ್ಟಿದ್ದನು.



ಒಂದು ದಿನ ಜೆಬುನ್ನಿಸಾ ಶರದೃತುವಾದ್ದರಿಂದ ಅರಮನೆಯ ಮೇಲಂತಸ್ತಿಕೆಯಲ್ಲಿ ಬಿಸಿಲು ಕಾಯುತ್ತಾ ಕೂತಿರುವಾಗ ತನ್ನ ಪ್ರೀತಿಯ ವಸ್ತು ಕನ್ನಡಿಯ ನೆನಪಾಗಿ ಅದನ್ನು ತರುವಂತೆ ಸಖಿಗೆ ಆಜ್ಞಾಪಿಸಿದಳು. ಆಕೆಯು ಹೋಗಿ ಒಳಗಿನಿಂದ ಕನ್ನಡಿಯನ್ನು ಎತ್ತಿಕೊಂಡಳು. ಕನ್ನಡಿಯ ಗುಣವೆಂದರೆ ಅದು ಯಾರು ಕೈಗೆ ಹೋಗುತ್ತದೋ ಮೊದಲು ಅವರ ಮುಖವನ್ನೊಮ್ಮೆ ನೋಡುವ ಆತುರತೆಯನ್ನುಂಟುಮಾಡುತ್ತದೆ. ಅದರಂತೆ ಸಖಿಯು ಕೂಡಾ ಮೊದಲಾಗಿ ತನ್ನ ಮುಖವನ್ನು ನೋಡಿಕೊಂಡಳು, ಹಾಗೆ ನೋಡುತ್ತಿದ್ದಂತೆ ಆಕೆಯ ಕೈಯಿಂದ ಕನ್ನಡಿ ಜಾರಿಬಿದ್ದು ಒಡೆದು ಹೋಯಿತು. ಅಷ್ಟಕ್ಕೆ ಸಖಿಯು ಹೆದರಿ ತನ್ನ ಅವಸ್ಥೆ ಇಂದಿಗೆ ಅಂತ್ಯವಾಯಿತೆಂದು ನೆನಸಿಕೊಂಡು ಅಲ್ಲಿಯೇ ನಿಂತುಬಿಟ್ಟಳು. ಬಹಳ ಸಮಯವಾದರೂ ಕನ್ನಡಿ ತರಲಿಕ್ಕೆ ಹೋದ ಸಖಿ ಬಾರದಿರುವುದನ್ನು ಕಂಡ ರಾಜಕುಮಾರಿ ಆಕೆಯನ್ನು ಕರೆಯ ತೊಡಗಿದಳು. ಆಗ ಸಖಿಯು ಮೆಲ್ಲನೆಹೋಗಿ ಅತ್ಯಂತ ಭೀತಳಾಗಿ ಕಾತರ ಸ್ವರದಿಂದ ಹೀಗೆ ಹೇಳಿದಳು. ಆಝ ಕಝಾ ಆಯಿನಾಯೇ ಚೀನೀ ಶಿಕಾಸ್ತ! ನನ್ನ ದುಷ್ಟ ಕರ್ಮದ ಫಲವಾಗಿ ಚೀನಾ ದೇಶದಿಂದ ಬಂದಿರುವ ಕನ್ನಡಿಯು ಒಡೆದು ಹೋಯಿತು. ಈ ತಪ್ಪಿಗೆ ಯಾವ ಶಿಕ್ಷೆಕೊಡುತ್ತಾಳೋ-ಏನೆಂಬ ನಿರೀಕ್ಷಣೆಯಲ್ಲಿದ್ದಳು. ಆದರೆ ರಾಜಕುಮಾರಿಯ ಮೇಲೆ ಉಪನಿಷತ್ತಿನ ಪ್ರಭಾವ ಆವರಿಸಿದ್ದುದರಿಂದ ಅವಳು ನಗೆಮುಖದಿಂದ ಸಖಿಯನ್ನು ನೋಡಿ-ಆಝುಝೂಆಯಿ ನಾಯೆ ಚೀನೀ ಶಿಕಾಸ್ತ ! ಖೂಬ್ ಶುವ ಸಾಮಾನೇ ಖುದ್ ಬೀನಿ ಶಿಕಾಸ್ತ ಅಂದರೆ ಚೀನಾ ದೇಶದಿಂದ ಬಂದಿದ್ದ ಕನ್ನಡಿ ಒಡೆದು ಹೋಯಿತೇ? ಬಹಳ ಒಳ್ಳೆಯದಾಯಿತು. ವಿಲಾಸಮಯ ಸಾಮಾನು ಹೋದದ್ದು ! ಯಾಕೆಂದರೆ ಅದನ್ನು ನೋಡುತ್ತಿದ್ದಾಗ ನಾನು ಬಹಳ ಸೌಂದರ್ಯವತಿಯೆಂಬ ಅಭಿಮಾನವು ನನ್ನ ಮನಸ್ಸಿನಲ್ಲುಂಟಾಗುತ್ತಿತ್ತು. ಇನ್ನು ಮುಂದೆ ಅದನ್ನು ನೋಡಲಿಕ್ಕೂ ಇಲ್ಲ. ಅಂತಹ ಅಭಿಮಾನವಾಗಲಿಕೂ ಇಲ್ಲ ಹೀಗಿತ್ತು ಉಪನಿಷತ್ತಿನ ಪ್ರಭಾವ. ಕಡೆಗೆ ಅವರಂಗಜೇಬನು ರಾಜ್ಯದ ಲೋಭತ್ವದಿಂದುಂಟಾದ ವೈರತ್ವ ಮೂಲಕ ಸೆರೆಸಿಕ್ಕಿದ ಅಣ್ಣನಾದ ದಾರಾಶಿಕೋಹನನ್ನೂ ೧೬೫೯ ನೇ ಇಸವಿಯ ಆಗಸ್ಟು ತಿಂಗಳ ೩೦ನೇ ತಾರೀಕಿನ ದಿನದಲ್ಲಿ ಕೊಲ್ಲಿಸುತ್ತಾನೆ. ಅಂತೂ ಉಪನಿಷತ್ತನ್ನು ಯಾರು ಓದುತ್ತಾರೋ, ಆಲಿಸುತ್ತಾರೋ ಅವರ ಮೇಲೆ ಅದು ಪ್ರಭಾವವನ್ನು ಬೀರಿ ಮೋಹಿಸುತ್ತದೆಂಬುದಕ್ಕೆ ಸಂದೇಹವಿಲ್ಲ.

ಅನಂತರ ೧೬೫೭ ರಿಂದ ೧೭೭೫ ನೇ ಇಸವಿ ತನಕದ ಈ ೧೧೮ ವರ್ಷಗಳಲ್ಲಿ ಉಪನಿಷತ್ತುಗಳ ಅನುವಾದಮಾಡುವ ಗೊಡವೆಗೆ ಯಾರು ಹೋಗಲಿಲ್ಲ, ೧೭೭೫ ನೇ ಇಸವಿಯಲ್ಲಿ ಬಂಗಾಲದ ನವಾಬನಾದ ಶುಜಾವುದ್ದೌಲನ ದರ್ಬಾರದಲ್ಲಿ ಮಿಸ್ಟರ್ ಯಮ್ ಗೆಂಟಲ್ ಹೆಸರಿನ ಒಬ್ಬ ಫ್ರಾಂಸಿನ ರಾಜದೂತನಿದ್ದನು. ಆತನು ದಾರಾಶಿಕೋಹನು ಅನುವಾದ ಮಾಡಿದ ಫಾರ್ಸಿ ಭಾಷೆಯಲ್ಲಿದ್ದ ಉಪನಿಷತ್ತಿನ

ವಿಷಯವನ್ನು ತಿಳಿದು ಅದರ ಒಂದು ಪ್ರತಿಯನ್ನು ಬೆಲೆಗೆ ಪಡೆದುಕೊಂಡು ಫ್ರಾನ್ಸಿಗೆ ಹೋಗಿ ಅದನ್ನು ತನ್ನ ಮಿತ್ರನಾದ ಚರ್ನಿಯರ್ ಯೆಂಬವನಿಗೆ ಕೊಟ್ಟನು. ಆತನು ಅದನ್ನು ಓದಿ ನೋಡಿ ಬಹಳ ಸಂತೋಷಪಟ್ಟು ಆ ಪ್ರತಿಯನ್ನು ಫ್ರಾನ್ಸಿನ ದೊಡ್ಡ ಪಾದ್ರಿ ಹಾಗೂ ಜೆಂದಾವಸ್ತಾದ (ಪಾರ್ಸಿಯವರ ಧರ್ಮಗ್ರಂಥ) ಆವಿಷ್ಕಾರಕನಾದ ಎಂಕ್ವೆಟಿಗ್ ಡುಪಾರನ್ ಯೆಂಬವರಿಗೆ ಕೊಡುತ್ತಾನೆ. ಅವರು ದಾರಾಶಿಕೋಹನ ಅನುವಾದವನ್ನು ಓದಿನೋಡಿ ಬಹಳ ಪ್ರಭಾವಿತರಾದರು. ಆದರೆ ಸಂಸ್ಕೃತದಲ್ಲಿರುವ ಇದರ ಮೂಲಗ್ರಂಥವನ್ನೇ ಓದಿ ತಿಳಿಯಬೇಕೆಂದು ಸಂಕಲ್ಪಮಾಡಿ ಅವರು ಫ್ರಾನ್ಸಿನಿಂದ ಭಾರತಕ್ಕೆ ಬಂದ ಇಲ್ಲಿ ೧೪ ವರ್ಷಗಳವರೆಗೆ ಸಂಸ್ಕೃತ ಕಲಿತು ಆ ಮೇಲೆ ಉಪನಿಷತುಗಳ ಸ್ವಾಧ್ಯಾಯ ಮಾಡಲಾರಂಭಿಸಿದರು. ಉಪನಿಷತ್ತಿನ ವಿಷಯದಲ್ಲಿ ಮತ್ತಷ್ಟು ಪ್ರಭಾವಿತರಾದ ಅವರು ದಾರಾಶಿಕೋಹನ ಪಾರ್ಸಿಭಾಷೆಯ ಅನುವಾದವನು ಫ್ರೆಂಚ್ ಮತ್ತು ಲೇಟಿನ್ ಭಾಷೆಗಳಲ್ಲಿ ಅನುವಾದ ಮಾಡಿದರು. ಆ ಪೈಕಿ ಲೇಟಿನ್ ಭಾಷೆಯ ಅನುವಾದವು ೧೮೦೧–೨ ನೇ ಈಸವಿಯಲ್ಲಿ " Oupnekhat " ಹೆಸರಿಂದ ಪ್ರಕಾಶನವಾಯಿತು. ಫ್ರೆಂಚಿನ ಅನುವಾದವು ಮಾತ್ರ ಹಾಗೆಯೇ ಉಳಿಯಿತು.

ಹುಟ್ಟನಿಂದ ನಾವ್ಯಾರೂ ಮುಸ್ಲಿಮರಗಲಿ, ಕ್ರೈಸ್ತರಾಗಲಿ, ಪಾರ್ಸಿಗಳಾಗಲಿ ಹಿಂದು (ಜೈನ, ಬೌದ್ಧ, ಸಿಖ್' ಹರಿಜನ–ಗಿರಿಜನ, ಹೊಲೆಯ–ಮದಿಗ ಇತ್ಯಾದಿ) ಗಳಾಗಲಿ ಅಲ್ಲ. ನಾವೆಲ್ಲರೂ ಕೇವಲ ಮಾನವರಾಗಿದ್ದೇವೆ' ಒಬ್ಬನೇ ಪರಮಾತ್ಮನ ಮಕ್ಕಳಾದುದರಿಂದ ಪರಸ್ಪರ ಸಹೋದರಿಯರೇ ಆಗಿದ್ದೇವೆ. ಆದ್ದರಿಂದ ಮಾನವತೆ ನಮ್ಮೆಲ್ಲರ ಧರ್ಮವಾಗಿದೆ ಮನವತ್ವವನ್ನು ಮರೆಯಿಸಿ. ದಾನವತ್ವವನ್ನು ಮೆರೆಯಿಸುವ ತತ್ವಗಳು ಎಂದಿಗೂ ಧರ್ಮವೆನಿಸಲಾರವು: ಎಂದಿಗೂ ಪರಮಪಿತ ಜಗದ್ವದಾತನಿಗೆ ಸಮತವೆನಿಸಲಾರವು. ಹಿಂಸೆ ಜಗಳಗಳನ್ನು ನಡೆಸುವವರು. ನಡೆಸಲು ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾ ಆಗಲಿ ಪ್ರೇರಣೆ ನೀಡುವವರು ನಿರ್ವಿವಾದವಾಗಿ ಮಾನವತೆಯ ಶತ್ರುಗಳು. ಧರ್ಮದ್ವೇಷಿಗಳು ಹಾಗೂ ಭಗವದ್ದ್ರೋಹಿಗಳೇ ಆಗಿದ್ದಾರೆ ನಿಜವಾದ ಅರ್ಥದಲ್ಲಿ ಧಾರ್ಮಿಕನಾದವನ ಭಗವದ್ಭಕ್ತನಾದವನ ಹೃದಯವು ಹಿಂಸೆ ದ್ವೇಷ, ಮಾತ್ಸರ್ಯ, ಸೇಡ ಸಂಕುಚಿತ ಮನೋಭಾವನೆಗಳಿಗೆ ಎಂದೆಂದಿಗೂ ಆಶ್ರಯ ನಿಡಲಾರದು ಅದು ಪ್ರೇಮ ವಿಶ್ವಾಸ ವಿಶ್ವಸಹೋದರತ್ವ, ಉದಾರತೆ ಸೌಜನ್ಯ ಕರುಣೆ ಸಹನೆಗಳ ಮಮೃತಕುಂಭವಾಗಿರುತ್ತದೆ ಒಬ್ಬ ವ್ಯಕ್ತಿ ಇಂದು ಸಮಾಜ ಧರ್ಮನಿಷ್ಠವಾಗಿದೆಯೋ, ಭಗವದ್ಭಕ್ತಿಯಿಂದ ಕೂಡಿದೆಯೋ ಇಲ್ಲವೋ ಎಂಬುದಕ್ಕೆ ಇದೇ ಅಳತೆಗೋಲು. ಈ ಅಳತೆಗೋಲಿನ ಅಳವಿಗೆ ಸಿಕ್ಕುವ ಮನವಧರ್ಮದ ಅನುಯಾಯಿಗಳು ನಾವಾಗೋಣ; ಸುಖರಾಜ್ಯವನ್ನು ಈ ಧರೆಯಲ್ಲೇ ಸ್ಥಾಪಿಸೋಣ ●





# ಹಿಂದೂ ಸಮಾಜದಲ್ಲಿ-ಸ್ತ್ರೀ-ಒಂದು ವಿವೇಚನೆ.

ಲೇಖಕ :– ಎನ್. ಸಿದ್ಧಲಿಂಗಯ್ಯ ಎಂ.ಎ ಬಿ.ಇಡಿ.
ಅಧ್ಯಾಪಕರು, ಗ್ರಾಮಾಂತರ ಪ್ರೌಢಶಾಲೆ, ಅಂಕನಹಳ್ಳಿಮಠ ಕುಣಿಗಲ್ ತಾಲ್ಲೂಕು.

ಕಾಳಿದಾಸಾದಿ ಕವಿಗಳ ಕಾವ್ಯಗಳಲ್ಲಿ ಬರುವ ನಾಯಕಿಯರು ವಿದ್ಯಾವಂತರಾಗಿದ್ದರು. ಶಕುಂತಲೆ ತನ್ನ ಪ್ರಿಯತಮನಿಗೆ ಪ್ರೇಮದ ಪತ್ರವನ್ನು ಬರೆಯುವಳು. ಮೇಘದೂತದಲ್ಲಿ ಕಥಾನಾಯಕಿ ವಿರಹದಿಂದ ಪರಿತಪಿಸುವಾಗ ಪ್ರಿಯತಮನ ನೆನಪುಗಳನ್ನು ತರುವ ಕವನಗಳನ್ನು ಬರೆಯುತ್ತಿದ್ದಳೆಂದು ಕವಿ ಹೇಳುತ್ತಾನೆ. ರಾಜಶೇಖರನ ಕಾವ್ಯಮೀಮಾಂಸದಲ್ಲಿ ಕೂಡ ಅನೇಕ ವಿದ್ಯಾವತಿಯರ ಹೆಸರಿವೆ. ಬೌದ್ಧಧರ್ಮದ ಪ್ರಾಬಲ್ಯ ಸ್ಥಿತಿಯಲ್ಲೂ ಅನೇಕ ವಿದ್ಯಾವಂತ ಮಹಿಳೆಯರು-ಬೌದ್ಧಧರ್ಮಕ್ಕೆ ಸೇರಿದರು ಬೌದ್ಧಧರ್ಮದ ನಂತರ ಪ್ರಾಬಲ್ಯಕ್ಕೆ ಬಂದ ಶಂಕರಾಚಾರ್ಯರ ಕಾಲದಲ್ಲೂ ವಿದ್ಯಾವಂತ ಸ್ತ್ರೀಯರಿದ್ದರೆಂದು ತಿಳಿದುಬರುತ್ತದೆ. ವೈದಿಕ, ಜೈನ ಬೌದ್ಧ ಯುಗಗಳಲ್ಲಿ ಮಹಿಳೆಯರು ಸಾಧಿಸಿದ ಆತ್ಮೋನ್ನತಿ, ಧರ್ಮಜಾಗೃತಿ, ಸಾಹಿತ್ಯನಿರ್ಮಿತಿಗಳು ಚಿರಸ್ಮರಣೀಯವಾಗಿವೆ. ಮಹಿಳೆಯರ ವ್ಯಕ್ತಿತ್ವ ವಿಕಾಸಕ್ಕೆ ಅವಕಾಶ ದೊರೆತಾಗಲೆಲ್ಲ ಅವರು ನಮ್ಮ ಪ್ರತಿಭೆಯ ಬೆಳಕನ್ನು ಬೀರಿದ್ದಾರೆ. ಈ ಮಾಲೆಗೆ ಹನ್ನೆರಡನೆಯ ಶತಮಾನದ- ಶಿವಶರಣೆಯರ ಸಾಧನೆಯು ಮಹತ್ವದ ಉದಾಹರಣೆಯಾಗಿದೆ.

ಬಲವಂತದಿಂದ ಸಮಾಜವು ಎಂದು ಸ್ತ್ರೀಯರನ್ನು ಸಂಯಮಿಗಳನ್ನಾಗಿ ಮಾಡಲು ಉಪಕ್ರಮಿಸಿತೋ ಅಂದಿನಿಂದಲೇ ಅನೇಕ ನ್ಯೂನಾತಿ ರೇಕಗಳು ನಮ್ಮ ಸಮಾಜದಲ್ಲಿ ತಲೆದೋರಿದವು. ಪತಿಯ ಆಸರೆಯಿಲ್ಲದೆ ಬಾಲ್ಯದಲ್ಲಿಯೇ ಅವನನ್ನು ನೀಗಿಕೊಂಡು ಜಗದಲ್ಲಿ ಬಾಳನ್ನು ಹೊರುತ್ತಿರುವಾಗ ಒಮ್ಮೆ ಎಡವಿದರೆ ಸಾಕು ಸಮಾಜದ ಕಟ್ಟು ನಿಂದೆಗೆ ಇಡಾಗುತ್ತಿದ್ದರು. ಬಲಾತ್ಕಾರದಿಂದ ಪುರುಷನಾಗಲೀ ಸ್ತ್ರೀಯಾಗಲೀ ಇಂದ್ರಿಯಗಳನ್ನು ನಿಗ್ರಹಿಸಲಾರರು. ಇಂದ್ರಿಯಗಳನ್ನು ನಿಗ್ರಹಿಸಬೇಕೆಂಬ ಇಚ್ಛೆ ತಮ್ಮ ಅಂತರಾಳದಿಂದ ಬರಬೇಕು ಸಮಾಜದ ಕಟ್ಟು–ಪಾಡುಗಳ ಪಂಜರದಲ್ಲಿರುವಾಗ ತೋರಿಕೆಗೆ ಅವರು ಸಾಧುವಾಗಿತೋರಬಹುದು. ಆದರೆ ಆದರಿಂದ ಅವರ ಮನಸ್ಸಿನ ಮೇಲೆ ನಂತರ ಸಮಾಜದ ಮೇಲೆ ಘೋರ ಪರಿಣಾಮ ಉಂಟಾಗುವುದು.

ಭಾರತದ ಇತಿಹಾಸವನ್ನು ಅವಲೋಕಿಸಿದಾಗ ಸ್ತ್ರೀಯರನ್ನು ಉದ್ದಕ್ಕೂ ಕಡೆಗಣಿಸಿದ್ದೇ ಆಗಿದೆ. ಹೆಣ್ಣು ಮುಖ್ಯವಾಗಿ ಹೆಂಡತಿ ಮತ್ತು ತಾಯಿ; ಹೆಂಡತಿಯಾಗಿ ಮಕ್ಕಳನ್ನು ಹೆರಬೇಕು. ಗಂಡನ ವಂಶಾಭಿವೃದ್ಧಿ ಮಾಡಬೇಕಾಗಿದ್ದಿತು. ಈ ದಿಶೆಯಲ್ಲಿ ಆಕೆ ವಿಫಲಳಾದರೆ ಆಕೆಯನ್ನು ಬದಿಗೊತ್ತಿ ಇನ್ನೊಬ್ಬಳನ್ನು ಕೈ ಹಿಡಿಯುವ ಹಕ್ಕು ಗಂಡನದಾಗಿತ್ತು. ಗಂಡು ಮುಖ್ಯವಾಗಿ ಹೆಣ್ಣನ್ನು ನೋಡಿಕೊಂಡು ಬಂದ ಬಗೆ ಇದು. ಅವಳದೇ ಆದ ಬೌದ್ಧಿಕ ಜೀವನವೊಂದು ಸಾಧ್ಯ ಎಂಬುದನ್ನು ಸಂಪೂರ್ಣವಾಗಿ ಅಲಕ್ಷಿಸಿದರು. ಅದರ ಜೊತೆಯಲ್ಲಿಯೇ ಸ್ತ್ರೀಯರಿಗೆ ಉಪನಯನ ಸಂಸ್ಕಾರವನ್ನು ನಿರಾಕರಿಸಿ ಅವಳು ಶೂದ್ರರಂತೆಯೇ ವೇದಾಧ್ಯಯನಕ್ಕೆ ಅನರ್ಹಳೆಂದು ಭಾವಿಸಿದರು. ಸ್ತ್ರೀಯರಿಗೆ ವಿವಾಹವು ಉಪನಯನಕ್ಕೆ ಸಮವೆಂದು ಹೇಳಿದರೂ, ಜ್ಞಾನ ಸಾಧನೆ ಅಗತ್ಯವಿಲ್ಲವೆಂದು ಭಾಸಲಾಗಿದೆ. 'ಮನು' ಸ್ತ್ರೀಯು ಸ್ವಾತಂತ್ರ್ಯಕ್ಕೆ ಅನರ್ಹಳು ಎಂದು ತೀರ್ಮಾನಕೊಟ್ಟಿದ್ದಾನೆ. ಅವಳ ಕಾರ್ಯಕ್ಷೇತ್ರ ಮುಖ್ಯವಾಗಿ ಮನೆ ಅಥವಾ ಮನೆಯ ಒಳಭಾಗ. ಭಾರತದ ಸಾಂಸ್ಕೃತಿಕ ಇತಿಹಾಸದಲ್ಲಿ ಅಥವಾ ಬೌದ್ಧಿಕ ಇತಿಹಾಸದಲ್ಲಿ ಸ್ತ್ರೀಯಾವ ಪಾತ್ರವನ್ನು ವಹಿಸಬೇಕಾಗಿತ್ತೋ ಅದಕ್ಕೆ ಅವಕಾಶವಿಲ್ಲವಾಯಿತು. ಧಾರ್ಮಿಕ, ಸಾಮಾಜಿಕ ಜೀವನದಲ್ಲಿ ವೈಶಮ್ಯ ತಲೆದೋರಿತ್ತು. ಮಹಿಳೆ ದೇವ ಪೂಜೆಗೆ ಅನರ್ಹಳು, ಶೂದ್ರಸಮಾನಳು ಎಂಬಭಾವನೆ ನೆಲೆಗೊಂಡಿತ್ತು.

ಹೆಣ್ಣು ಮಕ್ಕಳ ಬದುಕು ಈ ರೀತಿಯ ದುರುವಸ್ಥೆಗೀಡಾದಾಗ ೧೨ ನೇ ಶತಮಾನದಲ್ಲಿ ಬಸವಾದಿ ಶರಣರು ಅನುಭವಮಂಟಪಸ್ಥಾಪಿಸಿ, ಮಹಿಳೆಯರಿಗೆ ಮುಕ್ತ ಅವಕಾಶವನ್ನು ನೀಡಿದ್ದರು. ಹೆಣ್ಣನ್ನು ಬಾಹ್ಯ ವಿಶಯುಗಳಿಂದ ಕಳಚಿ ಅವಳಿಗೆ ಬೌದ್ಧಿಕವಾಗಿ ಮನ್ನಣೆನೀಡಿ, ಕ್ರಿಯಾಶಕ್ತಿಯನ್ನು ಗುರುತಿಸಿದ್ದು ಬಸವಣ್ಣನವರ ಕಾಲದಲ್ಲಿ ಮಾತ್ರ. ಹೆಣ್ಣು, ಗಂಡಿನ ಭೇದವಿಲ್ಲದೆ ಆಧ್ಯಾತ್ಮಿಕ, ಸಾಮಾಜಿಕ ಸ್ವಾತಂತ್ರ್ಯಗಳನ್ನು ನೀಡಲೂ ಮನಸ್ಸು ಮಾಡಿರುವುದು ಇತಿಹಾಸದಲ್ಲಿ ಅಪರೂಪದ ಅಂಶವಾಗಿ ಕಂಡುಬರುತ್ತದೆ. ವೀರಶೈವ ಸಮಾಜವು ಹೆಣ್ಣನ್ನು ಪರಂಪರಾಗತ ರೀತಿಯಲ್ಲೇ ನಡಸಿಕೊಂಡು ಬಂದಿತ್ತು. ಧಾರ್ಮಿಕವಾಗಿ, ಸಾಮಾಜಿಕವಾಗಿ ಕೀಳೆಂದು ಭಾವಿಸಿದ ಹೆಣ್ಣನ್ನು ಶರಣರು ಗೌರವದಿಂದ ಕಂಡರು; ಪರವಧುವನ್ನು ಮಹಾದೇವಿ ಎಂಬೆ, ಎಂದು ಬಸವಣ್ಣನವರು ತಮ್ಮ ವಚನದಲ್ಲಿ ಹೇಳಿದ್ದಾರೆ. ಶೂನ್ಯ ಸಿಂಹಾಸನಾಧೀಶ್ವರರಾದ ಪ್ರಭುದೇವರು.

"ಹೆಣ್ಣು ಮಾಯೆಯೆಂಬರು, ಹೆಣ್ಣು ಮಾಯೆಯಲ್ಲ;
ಹೊನ್ನು ಮಾಯೆಯೆಂಬರು, ಹೊನ್ನ ಮಾಯೆಯಲ್ಲ;
ಮಣ್ಣು ಮಾಯೆಯೆಂಬರು, ಮಣ್ಣು ಮಾಯೆಯಲ್ಲ;
ಮನದ ಮುಂದಣ ಆಸೆಯೇ ಮಾಯೆ ಕಾಣಾ ಗುಹೇಶ್ವರ"



ಹೆಣ್ಣನ್ನು ಮಾಯೆ, ಮೋಹ, ಸಂಸಾರಕ್ಕೆ ಬಂಧನಕಾರಿ ಎಂದು ಅಂದಿನ ಸಮಾಜದಲ್ಲಿ ಬೇರೂರಿದ್ದ ಭಾವನೆಗಳನ್ನು ತೆಗೆದು, ಹೆಣ್ಣು ಮಾಯೆಯಲ್ಲ, ಮನಸ್ಸಿನ ಮುಂದಿರುವ 'ಬೇಕು ಬೇಕು' ಎಂಬ ಆಸೆಯೇ ಮಾಯೇ ಎಂದು ಹೇಳಿದ್ದಾರೆ, ಇಷ್ಟೇ ಅಲ್ಲದೆ ಶಿವಯೋಗಿ ಸಿದ್ಧರಾಮೇಶ್ವರರು ಇನ್ನೂ ಒಂದು ಹೆಜ್ಜೆ ಮುಂದೆಸಾಗಿ ಈ ರೀತಿ ಹೇಳಿದ್ದಾರೆ.

'ತಾ ಮಾಡಿದ ಹೆಣ್ಣು ತನ್ನ ತಲೆಯನೇರಿತ್ತು;
ತಾ ಮಾಡಿದ ಹೆಣ್ಣು ತನ್ನ ತೊಡೆಯನೇರಿತ್ತು;
ತಾ ಮಾಡಿದ ಹೆಣ್ಣುಬ್ರಹ್ಮನ ನಾಲಿಗೆಯ ನೇರಿತು:
ತಾ ಮಾಡಿದ ಹೆಣ್ಣು ನಾರಾಯಣ ಎದೆಯ ನೇರಿತ್ತು;
ಅದು ಕಾರಣ,
ಹೆಣ್ಣು ಹೆಣ್ಣಲ್ಲ, ಹೆಣ್ಣು ರಕ್ಕಸಿಯಲ್ಲ;
ಹೆಣ್ಣು ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನ ನೋಡಾ!

ಈ ರೀತಿಯಾಗಿ ಶರಣರು ಸ್ತ್ರೀಯರನ್ನು ದೈವತ್ವ ಸ್ವರೂಪದಲ್ಲಿ ಕಂಡಿದ್ದಾರೆ. ಸ್ತ್ರೀಯರಿಗೆ ಅನುಭವಮಂಟಪದಲ್ಲಿ ಧಾರ್ಮಿಕ, ನೈತಿಕ. ಸಾಮಾಜಿಕ ಶಿಕ್ಷಣ ಒದಗಿಸಿ ಜೀವನದ ಸರ್ವರಂಗದಲ್ಲಿಯೂ ಪುರುಷನಂತೆ ಸಮಾನ ಅವಕಾಶ ಮಾಡಿಕೊಟ್ಟರು. ಹೆಣ್ಣನ್ನು ಮಾಯೆಯೆಂದು ಕಾಣುವುದು ವಿಕೃತಿ, ಹೆಣ್ಣನ್ನು ಭೋಗವಸ್ತುವೆಂದು ಪರಿಗಣಿಸುವುದು ಪ್ರಕೃತಿ, ಆದರೆ ಹೆಣ್ಣನ್ನು ತಾಯಿಯೆಂದು ಪರಿಗಣಿಸಿದುದು ಶರಣರ ಸಂಸ್ಕೃತಿಯಾಗಿದೆ.

ಅಂದಿನ ಕಾಲದ ಪುರುಷವರ್ಗದ ಸ್ತ್ರೀ ಶೋಷಣೆಯನ್ನು ಪ್ರತಿಭಟಿಸಿದವರೇ ಶರಣ–ಶರಣೆಯರು. ಪುರುಷರಂತೆ ದೇವರ ಪೂಜೆ, ಆಧ್ಯಾತ್ಮ ಚಿಂತನ, ಸಾಮಾಜಿಕ ಸ್ಥಿತಿ-ಗತಿಗಳ ಬಗ್ಗೆ ಕುರಿತು ಚಿಂತಿಸಿದರು. ಈ ಎಲ್ಲಾ ಸೇವೆಗೂ ಸ್ತ್ರೀ ಬಾಧ್ಯಸ್ಥಳು ಎಂಬುದಾಗಿ ಶರಣರು ಸಾರಿದರು- ಬಸವಾದಿ ಶರಣರು ಅಂದಿನ ಸಮಾಜದ ಜನರಲ್ಲಿ-ರುವ ಮನೋಭೂಮಿಕೆಯನ್ನು ಕೃಷಿಮಾಡಿ, ಸರ್ವರಿಗೂ ಸಂಸ್ಕಾರ ವಿತ್ತರು. ಕಾಯಕ ಕಲೆ ಉಪಾಸನೆಗಳನ್ನು ಸ್ತ್ರೀ–ಪುರುಷರೆಂಬ ಭೇದವಿಲ್ಲದೇ ಒದಗಿಸಿದರು. ತನುವಿನ ದುರ್ಗುಣಗಳನ್ನು ಕಳೆದುಕೊಂಡು ಭೌತಿಕ ತನು ಶುದ್ಧವಾಗುವುದು ಕಾಯಕದಿಂದ; ಮನದ ದುರ್ವಿಕಾರಗಳನ್ನು ತೊಡೆದುಕೊಂಡು ಮನಶುದ್ಧವಾಗುವುದು ಕಲೆಗಳಿಂದ; ಭಾವದ ದುರ್ಭಾವನೆಗಳು ನಾಶವಾಗುವುದು ಉಪಾಸನೆಯಿಂದ.

ಬಸವಾದಿ ಶರಣರು ಸ್ತ್ರೀಯರಿಗೆ ಆದರ್ಶ ಜೀವನ ಸಾಗಿಸಲು ಮುಕ್ತವಾಗಿ ಸ್ವಾತಂತ್ರ್ಯ ನೀಡಿದರು. ಶರಣರು ರೂಪಿಸಿದ ಅನುಭವ ಮಂಟಪದಲ್ಲಿ ಮಹಿಳೆಯರಿಗೆ

ಸಮಾನವಾದ ಅವಕಾಶ ಕಲ್ಪಿಸಿಕೊಟ್ಟರು. ಅನೇಕ ಜನ ಮಹಿಳೆಯರು ಈ ಸದಾವಕಾಶವನ್ನು ಸದುಪಯೋಗಪಡಿಸಿಕೊಂಡರು. ಆಧ್ಯಾತ್ಮ ಜ್ಞಾನವನ್ನು ಪಡೆಯಬೇಕೆನ್ನುವ ನೂರಾರುಮಹಿಳೆಯರು ಇಷ್ಟಲಿಂಗಧಾರಿಗಳಾದರು. ಸತ್ಯಶುದ್ಧ ಕಾಯಕದಲ್ಲಿ ನಿರತರಾದರು. ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲ ಮಾರ್ಗಗಳನ್ನರಿತು ಆಚರಿಸತೊಡಗಿದರು. ಹಲವಾರು ಶರಣೆಯರು ಅನುಭವ ಮಂಟಪದ ಶಿವಾನುಭವ ಘೋಷ್ಠಿಯಲ್ಲಿ ಶಿವಶರಣರೊಂದಿಗೆ ಸಮಾನತೆಯಿಂದ ಚರ್ಚಿಸಿದರು. ವಿಚಾರ ಮಂಥನದಿಂದ ಅಂತರಂಗದ ಆನಂದವನ್ನು ಲೋಕಾನುಭವವನ್ನು ಒಂದು ಗೂಡಿಸಿಕೊಂಡ ಶಿವಶರಣೆಯರು ತಿಳಿಗನ್ನಡದಲ್ಲಿ ವಚನಗಳನ್ನು ರಚಿಸಿದ್ದಾರೆ. ಇದರ ಪರಿಣಾಮವಾಗಿ ಸ್ತ್ರೀಯರಲ್ಲಿ ಹೊಸ ಚೈತನ್ಯ ಉದಯವಾಯಿತು. ಅಂತರಂಗದಲ್ಲಿ ಸುಪ್ತವಾಗಿದ್ದ ಅವರ ಅರಿವು ಜಾಗೃತವಾಯಿತು. ಪ್ರತಿಯೊಂದು ಕ್ಷೇತ್ರದಲ್ಲಿಯೂ ಅವರು ಮುಂದುವರಿದು ಕಾರ್ಯಕ್ಕೈಕೊಂಡರು. ಒಂದು ಕಾಲಕ್ಕೆ 'ಮಾಯೆ' ಎಂದೆನಿಸಿಕೊಂಡಿದ್ದ ಹೆಣ್ಣೇ ಮಾಯಾ ಬಂಧನವನ್ನು ಕಿತ್ತೊಗೆದು ಹೊರಬಂದರು. ಶರಣ ಜೇಡರ ದಾಸಿಮಯ್ಯನವರು ಹೇಳುವಂತೆ

ಮೊಲೆ ಮುಡಿ ಬಂದರೆ ಹೆಣ್ಣೆಂಬರು,
ಗಡ್ಡ ಮೀಸೆ ಬಂದರೆ ಗಂಡೆಂಬರು,
ನಡುವೆ ಸುಳಿವ ಆತ್ಮ ಹೆಣ್ಣೂ ಅಲ್ಲ, ಗಂಡೂ ಅಲ್ಲ
ಕಾಣಾ ರಾಮನಾಥಾ.

ಎಂಬ ಮಾತನ್ನು ತಾನು ಪಡೆದ ಸಿದ್ಧಿಯಿಂದ ಸಾರ್ಥಗೊಳಿಸಿದಳು.

ಇಂತಹ ಕಾಯಕ ತತ್ವದ ಅನುಷ್ಠಾನದಿಂದಾಗಿ ಅಂದು ಕಲ್ಯಾಣದಲ್ಲಿ ಆಯ್ದಕ್ಕಿ ಲಕ್ಕಮ್ಮ, ಮೋಳಿಗೆ ಮಹಾದೇವಮ್ಮ, ಲಿಂಗಮ್ಮ ಗಂಗಮ್ಮ, ಕಂತಿ, ದುಗ್ಗಳೆ ನೀಲಮ್ಮ, ಅಕ್ಕಮಹಾದೇವಿ, ನೀಲಾಂಬಿಕೆ, ಗಂಗಾಂಬಿಕೆ, ಸತ್ಯಕ್ಕೆ, ಮುಕ್ತಾಯಕ್ಕ, ಕಾಲ್ಯಾಣಮ್ಮ, ಕಾಳವ್ವೆ, ಅಕ್ಕನಾಗಮ್ಮ, ಇತ್ಯಾದಿ ನೂರಾರು ಮಹಿಳೆಯರು ಆದರ್ಶ ಜೀವನ ಸಾಗಿಸಿ ಶರಣೆಯರಾದರು.

೧೩, ೧೪ ನೇ ಶತಮಾನದ ವೇಳೆಗೆ

ಅಂದಿನ ಸಮಾಜದಲ್ಲಿ ಸ್ತ್ರೀಯರಿಗೆ ಅತ್ಯಂತ ಪವಿತ್ರವಾದ ಸ್ಥಾನವನ್ನು ಸೂಚಿಸಿದ್ದರೂ ವ್ಯಾವಹಾರಿಕವಾಗಿ ಅವರನ್ನು ಕೆಳದರ್ಜೆಯ ಸ್ಥಾನದಲ್ಲಿರಿಸಿ, ಪುರುಷರು ಸೇವೆಗೆ ಅವರನ್ನು ಮೀಸಲಿಡಲಾಗಿತ್ತು, ವಿಧವಾ ಸ್ತ್ರೀಯರಿಗೆ ವಿಧಿಸಿರುವ ಸಂಸ್ಕಾರಗಳು, ನಿಯಮಗಳು, ಅಮಾನವೀಯವಾಗಿದ್ದುವು. ಪೂಜ್ಯರಾದ ಆದಿಶಂಕರಾಚಾರ್ಯರು ಸ್ತ್ರೀಯರನ್ನು ನರಕದ ಹೆಬ್ಬಾಗಿಲು ಎಂದು ಬಣ್ಣಿಸಿದ್ದಾರೆ. ಶಂಕರರ



ಶಿಷ್ಯಪರಂಪರೆ, ಶಂಕರರ ಸಿದ್ಧಾಂತ ಮಾನವೀಯವೆಂದೂ ಘೋಷಿಸಿದ್ದರೂ ಸ್ತ್ರೀಯರ ಬಗ್ಗೆ ಅವರಿಗಿದ್ದ ಈ ತುಚ್ಛಭಾವನೆ, ಅವರ ಮಾನವೀಯತೆಯ ಅಭಾವವನ್ನು ಸೃಷ್ಟಿ ಕರಿಸುತ್ತದೆ. ಇಲ್ಲಿಯೂ ಕೂಡ ಆದಿಶಂಕರರು, ತಮ್ಮ ಅದ್ವೈತ ಸಿದ್ಧಾಂತ ಪ್ರಭೆಯಲ್ಲಿಯೂ ಕೂಡ ಹೆಣ್ಣು-ಗಂಡುಗಳ ನಡುವೆ ದ್ವೈತವನ್ನೇ ಕಂಡು ತಾರತಮ್ಯವನ್ನು ಗುರುತಿಸಿದರೇ ವಿನಃ ಸ್ತ್ರೀಯರಿಗೆ ಸಮಾನಸ್ಥಾನ ಕೊಡುವ ಪ್ರಯತ್ನ ಮಾಡಲಿಲ್ಲ.

ವಿಜಯನಗರದ ಅರಸರಕಾಲ ಅತ್ಯಂತ ವೈಭವೋಪೇತವಾಗಿ ಮೆರೆದ ಕಾಲವಾಗಿತ್ತು. ಅಂದಿನ ಕಾಲದಲ್ಲಿ ಬಂದಿದ್ದ ವಿದೇಶಿಪ್ರವಾಸಿಗರಾದ 'ಪಾಯಸ್, ಮತ್ತು ನ್ಯೂನಿಜ್', ಅವರ ಹೇಳಿಕೆಗಳಿಂದ ಸಮಾಜದಲ್ಲಿ ಹೆಂಗಸರಿಗೆ ಉನ್ನತ ಸ್ಥಾನವಿತ್ತು ರಾಜಕೀಯ, ಸಾಮಾಜಿಕ ಮತ್ತು ಸಾಹಿತ್ಯಕ್ಷೇತ್ರದಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದರು. ಅವರಿಗೆ ವಿದ್ಯಾಭ್ಯಾಸ ಸೌಲಭ್ಯಗಳೂ ಇನ್ನಿತರ ಶ್ರೇಷ್ಠ ಕಲೆಗಳಲ್ಲಿ ತರಪೇತಿ ಪಡೆಯುತ್ತಿದ್ದರು. ಸ್ತ್ರೀಪಡೆ ಅರಮನೆಯ ರಕ್ಷಣಾದಳವಾಗಿತ್ತು. ಬಹು ಪತ್ನಿತ್ವ, ಬಾಲ್ಯವಿವಾಹ ರೂಢಿಯಲ್ಲಿದ್ದವು ಎಂದು ಅಭಿಪ್ರಾಯ ಪಡುತ್ತಾರೆ.

ಮಹಮದೀಯರು ಭರತ ಖಂಡದ ಮೇಲೆ ಧಾಳಿ ಎತ್ತಲು ಮೊದಲು ಮಾಡಿದಂದಿನಿಂದ ನಮ್ಮ ಸ್ತ್ರೀಯರ ಗತಿ ಮತ್ತೂ ಶೋಚನೀಯವಾಗುತ್ತಾ ಬಂದಿತು. ಹಿಂದೂ ರಾಜರುಗಳು ಐಕ್ಯಮತ್ಯವಿಲ್ಲದೆ ತಮ್ಮ ತಮ್ಮಲ್ಲಿಯೇ ಕಾದು ಬಲಹೀನರಾದರು. ದಂಡೆತ್ತಿಬಂದ ಮಹಮ್ಮದೀಯರ ಬಲೆಗೆ ಬೀಳುತ್ತ ಒಬ್ಬೊಬ್ಬರಾಗಿ ಉತ್ತರ ಭರತಖಂಡದ ರಂಗದಿಂದ ಕಣ್ಮರೆಯಾಗುತ್ತಾ ಬಂದರು. ಎಂದಿನಿಂದ ಹಿಂದೂ ರಾಜರ ಬಲಕುಂದಿತೂ ಅಂದಿನಿಂದಲೇ ಹಿಂದೂ ಸಮಾಜ ಅನ್ಯ ಧರ್ಮದೊಂದಿಗೆ ಸೆಣಸಬೇಕಾಯಿತು. ಆಗ ಹಿಂದೂ ಧರ್ಮದ ಗುರಿ ಅಭಿವೃದ್ಧಿಯಲ್ಲಿ ಇರುವುದನ್ನು ಹೇಗಾದರೂ ಉಳಿಸಿಕೊಳ್ಳಬೇಕೆಂಬುದಾಯಿತು. ಸೂತ್ರಕಾರರು ನಾರಿಯರನ್ನು ಇನ್ನೂ ಹೆಚ್ಚು ಬಂಧನದಿಂದ ಬಿಗಿಯ ತೊಡಗಿದರು. ಎಂಟು ವರ್ಷಕ್ಕೆ ಮುಂಚೆಯೇ ವಿವಾಹ ನಿರವೇರಿಸಲು ಪ್ರಾರಂಭಿಸಿದರು. ಮಹಮ್ಮದೀಯರ ಪ್ರಾಬಲ್ಯವಿದ್ದೆಡೆಯಲೆಲ್ಲಾ ಘೋಷಾಪದ್ಧತಿ ಜಾರಿಗೆ ಬಂದಿತು. ಸಹಗಮನದ ಉರಿ ದೇಶದ ನಾನಾಕಡೆ ಎದ್ದಿತು, ಇದಾವುದೂ ವೈದಿಕ ಕಾಲದಲ್ಲಿರಲಿಲ್ಲ.

ಕಳೆದ ಎರಡು ಶತಮಾನದ ಮಧ್ಯಭಾಗದಲ್ಲಿ ಆಂಗ್ಲ ಚಕ್ರಾಧಿಪತ್ಯಕ್ಕೆ ಭರತ ಖಂಡವೆಲ್ಲವೂ ಸೇರಿತ್ತು. ಆಂಗ್ಲೇಯ ವಿದ್ಯಾಸಂಸ್ಥೆಗಳು ಭರತ ಖಂಡದ ಮೂಲೆ ಮೂಲೆಯಲ್ಲಿಯೂ ಸ್ಥಾಪಿತವಾಗ ತೊಡಗಿದವು. ಆಂಗ್ಲ ಭಾಷೆಯ ಮೂಲಕ ಪಾಶ್ಚಾತ್ಯ

ಸಂಸ್ಕೃತಿ; ವಿಜ್ಞಾನ, ಧರ್ಮ, ಸಾಹಿತ್ಯ ರಾಜಕೀಯ ಮತ್ತು ಸಾಮಾಜಿಕ
ಭಾವನೆಗಳು ಕ್ರಮೇಣ ಹಿಂದೂ ದೇಶದ ವಾತಾವರಣದಲ್ಲಿ ತಮ್ಮ ಪ್ರಭಾವವನ್ನು
ಬೀರಿದವು. ಮೊದ ಮೊದಲು ಪಾಶ್ಚಾತ್ಯರ ಸಮ್ಮೋಹನಾಸ್ತ್ರಕ್ಕೆ ಮರುಳಾಗಿ ನಮ್ಮ
ವರು ಬಲೆಗೆ ಬೀಳುತ್ತಿದ್ದರು. ಕೆಲವು ಕಾಲದ ಮೇಲೆ ಹಿಂದೂ ಧರ್ಮ ಜಾಗೃತ-
ವಾಯಿತು.

ಒಬ್ಬೊಬ್ಬರು ಸಮಾಜದ ಒಂದೊಂದು ಅನಾಯ ಕತೆಯ ಕಡೆಗಮನ ಹರಿಸಿ-
ದರು ಹಲವರು ಹಿಂದೂ ಸಮಾಜದಲ್ಲಿ ನಾರಿಯರಿಗೆ ಅನೇಕ ಕುಂದು ಕೊರತೆಗಳಿವೆ
ಎಂಬುದರ ವಿರುದ್ಧ ಹೋರಾಡಿದರು. ಹಲವು ಕಡೆ ಬಳಕೆಯಲ್ಲಿದ್ದ ಬಾಲ್ಯ ವಿವಾಹ
ಚಿಕ್ಕಂದಿನಲ್ಲಿ ಬೊಂಬೆಯೊಂದಿಗೆ ಆಟವಾಡುವಾಗಲೇ ತನ್ನ ಮೇಲೆ ಬೀಳುವ ತಾಯ್ತ
ನದ ಹೊರೆ. ಗಂಡನಾರೆಂಬ ಪರಿಚಯವಿಲ್ಲದಿರುವಾಗಲೇ ಆತನನ್ನು ಕಳೆದುಕೊಂಡು
ಜೀವನವನ್ನೆಲ್ಲ ಚಿರವೈಧವ್ಯದಲ್ಲಿ ಕಳೆದು ದುಃಖಿಸುವವರ ಕಣ್ಣೀರು ಯಾರ ಮನ-
ಸ್ಸನ್ನು ತಾನೇ ಕರಗಿಸದು ? ಆಕೆಗೆ ಪುರುಷನಿಗಿರುವಂತೆ ಸ್ವಾತಂತ್ರವಿಲ್ಲ. ಆಕೆ
ಕೇವಲ ಪತಿಯ ಕ್ರೀಡಾವಸ್ತು. ಅನೇಕರು ಅವಳು ಮಕ್ಕಳನ್ನು ತಯಾರು-
ಮಾಡುವ ಒಂದು ಕಾರ್ಖಾನೆಯೆಂದು ತಿಳಿದಿದ್ದರು. ಇವರ ದುಃಸ್ಥಿತಿಯನ್ನು
ನಿವಾರಿಸಲು ಅನೇಕರು ಮುಂದಾದರು. ಅವರಲ್ಲಿ ರಾಜಾರಾಮ ಮೋಹನರಾಯ್
ಪ್ರಯತ್ನಪಟ್ಟು ಸಹಗಮನವನ್ನು ನಿಲ್ಲಿಸುವ ನಿರ್ಣಯವನ್ನು ತಂದರು, ಆಂಗ್ಲ
ಸರ್ಕಾರದವರೂ ಅದನ್ನು ಅನುಮೋದಿಸಿ ಸಹಗಮನವನ್ನು ಮಾಡುವುದು ಕಾನೂನಿಗೆ
ವಿರುದ್ಧವೆಂದು ಸಾರಿದರು. ಈಶ್ವರಚಂದ್ರ ವಿದ್ಯಾಸಾಗರರು ನಮ್ಮ ಹಿಂದಿನ ಸ್ಮೃತಿ
ಗಳಿಂದ ಅಲ್ಲಿ ವಿಧವೆಯರಿಗೆ ಪುನಃ ಮದುವೆಯಾಗಲು ಅಧಿಕಾರವಿದೆ, ಅದರಂತೆ-
ಈಗಿನವರು ನಡೆಯಲು ಅಭ್ಯಂತರವಿಲ್ಲವೆಂದು ವಿಶದಪಡಿಸಿದರು, ಇತ್ತ ಪಂಜಾಬ್
ಕಡೆ ದಯಾನಂದ ಸರಸ್ವತಿ ವೈದಿಕ ಕಾಲದಲ್ಲಿ ಸ್ತ್ರೀಯರಿಗೆ ಯಾವ ಸ್ವಾತಂತ್ರ್ಯ-
ವಿತ್ತೊ ಅದನ್ನು ಮತ್ತೆ ದೊರಕಿಸಿ ಕೊಡಲು ಮೊದಲು ಮಾಡಿದರು.

ನಂತರ ಗಾಂಧೀಜಿಯವರು ರಾಜಕೀಯ ರಂಗಕ್ಕೆ ಕಾಲಿಟ್ಟಂದಿನಿಂದ ಸ್ತ್ರೀಯರ
ಇತಿಹಾಸದಲ್ಲಿ ಒಂದು ಹೊಸ ಅಧ್ಯಾಯವೇ ಪ್ರಾರಂಭವಾಯಿತು. ಪುರುಷನಿಗೆ
ಸರಿ ಸಮಾನರಾಗಿ ಅವರು ಸ್ವಾತಂತ್ರ್ಯಸಂಗ್ರಾಮದಲ್ಲಿ ಭಾಗವಹಿಸಿದರು. ಬ್ರಿಟೀಷರು
ಕೊಡುವ ಹಿಂಸೆಗಳನ್ನೆಲ್ಲಾ ಸಹಿಸಿಕೊಂಡರು. ಸೆರೆಮನೆಗೂ ನಗುಮುಖದಿಂದ
ಹೋದರು. ರಾಜ್ಯಡಳಿತ ಸೂತ್ರಗಳನ್ನು ವಹಿಸಿಕೊಂಡರು. ಇನ್ನು ಕೆಲವು ಸಂಸ್ಥಾನ
ಗಳಲ್ಲಿ ಸ್ತ್ರೀಯರು ಮಂತ್ರಿಗಳಾಗಿರುವರು. ಹಲವೆಡೆ ಪ್ರಜಾಪ್ರತಿನಿಧಿ ಸಭೆಗಳಲ್ಲಿ
ಶಾಸನ ರಚನಾ ಸಭೆಗಳಲ್ಲಿ ಸದಸ್ಯರಾಗಿ ಹೋಗಿ ತಮ್ಮ ಕುಂದು ಕೊರತೆಗಳನ್ನು
ಬಹಿರಂಗವಾಗಿ ಟೀಕಿಸಿ, ಚರ್ಚಿಸುತಿರುವರು. ಪುರುಷರಂತೆ ಅವರು ವಿದ್ಯಾ ವ್ಯಾಸಂಗ



ಮಾಡುತ್ತಿರುವರು. ವಿದ್ಯಾಸಂಸ್ಥೆಗಳಿಂದ ಪ್ರತಿ ವರ್ಷವೂ ಅನೇಕ ಸ್ತ್ರೀ ಪದವೀಧರರು
ಬರುತ್ತಿರುವರು. ಎಲ್ಲಾ ವೃತ್ತಿಗಳನ್ನು ಕೈಗೊಂಡು ಆಚರಿಸುತ್ತಿರುವರು. ಅವರಲ್ಲಿ
ಉಪಾಧ್ಯಾಯಿನಿಯರಿರುವರು, ವೈದ್ಯರಿರುವರು, ವಿಜ್ಞಾನಿಗಳಿರುವರು, ವಕೀಲರಿರು-
ವರು, ರಾಜಕಾರಣ ಪಟುಗಳಿರುವರು. ಇನ್ನೂ ಇತ್ಯಾದಿ ಕ್ಷೇತ್ರಗಳಲ್ಲಿ ಮಹಿಳೆಯರು
ಕಾರ್ಯನಿರ್ವಹಿಸುತ್ತಿದ್ದಾರೆ.

ದಿನೇ ದಿನೇ ಅತಿವೇಗದಿಂದ ಉಲ್ಬಣಿಸುತ್ತಿರುವ ಹಣ್ಣದುಬ್ಬರದ ಈ ದುರ್ದರ
ದಿನಗಳಲ್ಲಿ ಒಂದು ಆದಾಯಕ್ಕಿಂತ ಎರಡು ಆದಾಯ ಉತ್ತಮ ಎಂಬಸತ್ಯ ಮಧ್ಯಮ
ವರ್ಗದವರಲ್ಲಿ ಗೋಚರಿಸುತ್ತಾ ಬಂದಿದೆ. ಇದರಂತೆ ಗಂಡ–ಹೆಂಡಿರ ಸಂಬಂಧದಲ್ಲಿ
ಹೊಸ ಹೊಂದಾಣಿಕೆ ಅಗತ್ಯ ವಿದೆಯಾದರೂ ಇಬ್ಬರೂ ದುಡಿಯ ಬಯಸುತ್ತಾರೆ
ಮನೆಗೆಲಸಗಳಲ್ಲಿ ಗಂಡನೂ ಹೆಚ್ಚು ಹೆಚ್ಚಾಗಿ ಭಾಗವಹಿಸುತ್ತಿದ್ದಾನೆ. ಈಗ ಪರಿಸ್ಥಿತಿ
ಬದಲಾಗಿದೆ. ಎಲ್ಲಾ ಮುಖ್ಯ ವಿಚಾರಗಳಲ್ಲಿ ಹೆಂಡತಿಯ ಅಭಿಪ್ರಾಯಗಳನ್ನು ಕೇಳ
ಲಾಗುತ್ತಿದೆ. ಗಂಡ ಹೆಂಡಿರ ಸಂಬಂಧದಲ್ಲಿ ಹೊಸ ಹೊಂದಾಣಿಕೆ ಅಗತ್ಯವಿದೆ
ಯಾದರೂ ಇಬ್ಬರೂ ದುಡಿಯ ಬಯಸುತ್ತಾರೆ. ಮನೆಗೆಲಸಗಳಲ್ಲಿ ಗಂಡನೂ
ಹೆಚ್ಚು ಹೆಚ್ಚಾಗಿ ಭಾಗವಹಿಸುತ್ತಿದ್ದಾನೆ. ಈಗ ಪರಿಸ್ಥಿತಿ ಬದಲಾಗಿದೆ.
ಎಲ್ಲಾ ಮುಖ್ಯ ವಿಚಾರಗಳಲ್ಲಿ ಹೆಂಡತಿಯ ಅಭಿಪ್ರಾಯಗಳನ್ನು ಕೇಳಲಾಗುತ್ತಿದೆ.
ಗಂಡಹೆಂಡಿರ ಸಂಬಂಧ ಹೆಚ್ಚು ಹೆಚ್ಚು ಸಮಾನತೆಯ ಆಧಾರದ ಮೇಲೆ ನಿಲ್ಲ
ತೊಡಗಿದೆ. ಇದರ ಜೊತೆಯಲ್ಲಿ ಮನೆಯ ಹಾಗೂ ಸುತ್ತಲಿನ ಸಾಮಾಜಿಕ ಜೀವನ
ಬದಲಾವಣೆಗಳಾಗತೊಡಗಿವೆ. ಮಡಿ ಮೈಲಿಗೆಗಳ ಹಿಡಿತ ಸಡಿಲವಾಗ ತೊಡಗಿದೆ.
ಆಹಾರ-ವಿಹಾರ, ಉಡುಪು, ಇವುಗಳಲ್ಲಿ ಸಾಕಷ್ಟು ಬದಲಾವಣೆಯಾಗಿದೆ, ಆಗುತ್ತಲೂ
ಇದೆ ಮನೆಗಳಲ್ಲಿ ಆಚರಿಸುತ್ತಿದ್ದ ಧಾರ್ಮಿಕ ವಿಧಿ ವಿಧಾನಗಳು ಸಾಕಷ್ಟು ಕಡಿಮೆ
ಯಾಗುತ್ತಲಿವೆ.

ಆದರೆ ಬದಲಾವಣೆಗಳೆಲ್ಲಾ ವಿದ್ಯಾವಂತ ಮಧ್ಯಮ ಹಾಗೂ ಉಚ್ಚ
ವರ್ಗಗಳಿಗೆ ಮಾತ್ರ ಸೀಮಿತ. ಬಡವರ ಮನೆ ಬಾಗಿಲ ಕಡೆಗೆ ಈ ಬದಲಾವಣೆ
ಗಳು ಇನ್ನು ತಲೆಹಾಕಿದಂತಿಲ್ಲ ಗ್ರಾಮೀಣ ಪ್ರದೇಶಗಳಲ್ಲಿ ಹೆಣ್ಣು ಮಕ್ಕಳಿಗೆ
ಶಿಕ್ಷಣ ನೀಡವುದಕ್ಕೆ ಇನ್ನೂ ವಿರೋಧವಿದೆ. ಬಡವರ ಮಟ್ಟಿಗೆ ಇದೂ ಸಹ
ನಿಜ. ಎಲ್ಲಾ ಪ್ರದೇಶಗಳ ಬಡವರ್ಗಗಳ ಹೆಣ್ಣು ಮಕ್ಕಳಿಗೆ ಶಿಕ್ಷಣ ನೀಡದಿದ್ದಲ್ಲಿ
ನಮ್ಮ ಸಾಮಾಜಿಕ ಬದಲಾವಣೆ ಅಪೂರ್ಣವಾಗೇ ಉಳಿಯುತ್ತದೆ

ಹಕ್ಕಿಯು ಒಂದೇ ಕಣ್ಣಿನಿಂದ ನೋಡ ಬಲ್ಲದು. ಆದರೆ, ಒಂದೇ ರೆಕ್ಕೆ-
ಯಿಂದ ಹಾರಲಾರದು. ಹಕ್ಕಿಯ ರೆಕ್ಕೆಗಳಂತೆ ಸ್ತ್ರೀ ಪುರುಷರು ಸಮಾಜದ

ಅವಿಭಾಜ್ಯ ಅಂಗಗಳು. ಸಮಾಜವು ಪುರುಷ ಪ್ರಧಾನವಾದರೆ ಹೇಗೋ ಜೀವನ ತಳ್ಳ ಬಹುದಾದರೂ ಸ್ತ್ರೀಯರಿಗೆ ಸ್ವಧರ್ಮಕ್ಕನುಗುಣವಾದ ಅವಕಾಶವನ್ನು ಕಲ್ಪಿಸದ ಹೊರತು ನಿಜವಾದ ಪ್ರಗತಿ ಸಾಧ್ಯವಿಲ್ಲ ಮನೋನೈರ್ಮಲ್ಯ, ಇಂದ್ರಿಯನಿಗ್ರಹ, ಪ್ರಾರ್ಥನೆ, ತಪಸ್ಸು, ಪೂಜೆ ಇವು ಪುರುಷನಿಗೆಷ್ಟು ಅವಶ್ಯಕವೋ ಸ್ತ್ರೀಗೂ ಅಷ್ಟೇ ಅವಶ್ಯಕ. ಆದರೆ ಇವರಿಬ್ಬರ ವ್ಯಕ್ತಿತ್ವದಲ್ಲಿ ಸಹಜವಾಗಿಯೇ ಕೆಲವು ಭೇದಗಳಿರು- ವುದರಿಂದ ಅವನ್ನು ಗಮನಿಸಿ ಹಿಂದೂ ಧರ್ಮವು ಅವರ ಸ್ವಧರ್ಮಾನುಗುಣವಾಗಿ ವಿಶೇಷ ಸಾಧನೆಗಳನ್ನು ನೀಡಿದೆ.

ಒಂದು ಸರಪಳಿಯ ಶಕ್ತಿ ಅದರ ಪ್ರತಿಯೊಂದು ಕೊಂಡಿಯನ್ನು ಅವಲಂಬಿ- ಸಿದೆ. ಪ್ರತಿಯೊಂದು ಸಂಸಾರವು ಸಮಾಜವೆಂಬ ಸರಪಳಿಗೆ ಕೊಂಡಿಯಿದ್ದಂತೆ. ಅದು ಭದ್ರವಾಗದ ಹೊರತು ಸಮಾಜದ ಸರಪಳಿ ಭದ್ರವಾಗಲಾರದು. ಸಂಸಾರದ ಕೇಂದ್ರ ವ್ಯಕ್ತಿ ಎನಿಸಿದ ಆಕೆಯು ನಿಜವಾಗಿ ತನ್ನ ಹೆಗಲ ಮೇಲೆ ಎಂತಹ ಗುರುತರ ಭಾರವನ್ನು ಹೊತ್ತಿದ್ದಾಳೆ ಎಂಬುದನ್ನು ಊಹಿಸಿ ಕೊಂಡರೆ! ಗೃಹಿಣಿಯಿಲ್ಲದಿದ್ದರೆ ಗೃಹವು ನಿಜವಾದ ಗೃಹವೇ ಆಗಲಾರದು. ಆದರ್ಶ ಗೃಹಿಣಿಯೇ ಹಿಂದೂ ಮಹಿಳೆಯರ ಅನುಕರಣೀಯ ಮೂರ್ತಿಯಾಗು- ತ್ತಾಳೆ. ಈಕೆಯೇ ಆದರ್ಶ ಧರ್ಮಪತ್ನಿ, ಆದರ್ಶಸತಿ, ಆದರ್ಶಮಾತೆ, ಸಹಸ್ರಾರು ವರ್ಷಗಳಿಂದ ಕೋಟ್ಯಾಂತರ ಹಿಂದೂ ಮಹಿಳೆಯರಿಗೆ ಸ್ಫೂರ್ತಿಯನ್ನಿತ್ತಿರುವ ಸೀತಾ, ಸಾವಿತ್ರಿ, ದಮಯಂತಿ, ಕಿತ್ತೂರುಚೆನ್ನಮ್ಮ, ಅಕ್ಕಮಹಾದೇವಿ, ಶ್ರೀಶಾರದ ದೇವಿ ಇತ್ಯಾದಿ ಆದರ್ಶ ಮಹಿಳೆಯರನ್ನು ಇಲ್ಲಿ ನೆನೆಯಬಹುದು.

ಹೆಣ್ಣಿನಿಂದಲೆ ಮನೆಯ ಬೆಳಕು ಶುಚಿ-ರುಚಿ' ಒಪ್ಪ ಓರಣ ಮನೆ ನಂದನ- ವನವಾಗುವುದು ಅವಳಿಂದಲೆ. "ಗೃಹಿಣೀ ಗೃಹಮುಚ್ಯತೆ" ಗೃಹಿಣಿಯು ಮನೆಯ ಗೌರವದ ರಕ್ಷಾ ಕವಚ. ಸ್ತ್ರೀಗೆ ಶೀಲ ಅತಿ ಮುಖ್ಯವಾದುದು. 'ಶೀಲಂ ಸರ್ವತ್ರ ವೈಧನಂ' ಎಂಬ ನುಡಿಯ ಸಾರ್ಥಕತೆಯು. ಸ್ತ್ರೀಯ ನಡತೆಯಲ್ಲಿ ಅಡಗಿದೆ. ಅವಳು ಸಮಾಜದ ಆದರ್ಶನಾರಿ ಎಂದು ಮರೆಯಬಾರದು. ಹೆಣ್ಣಿಗಿಂತ ಗಂಡು ಹೆಚ್ಚೆಂದು ತಿಳಿದರೂ ಸಮಾಜದಲ್ಲಿ ಗಂಡು ದುಡಿಯುವುದು ಹೆಣ್ಣಿಗಾಗಿಯೇ, ಮನೆ ಬಿಟ್ಟು ಎಷ್ಟೋ ಸಂದರ್ಭಗಳಲ್ಲಿ ಅಲೆಯುವುದೂ ಅದಕ್ಕಾಗಿಯೇ ಇಲ್ಲಿ ಜಾತಿ-ಬಣ್ಣಗಳ ಭೇದವಿಲ್ಲ, ಅಂತರವಿಲ್ಲ, ಒಬ್ಬರನ್ನೊಬ್ಬರು ಅರಿತರೆ ಅದೇ ನಿಜವಾದ ನೈಜತೆ.

ಹೂವಿನ ಮಕರಂದಕ್ಕಾಗಿ ದುಂಬಿ ಹಾರಾಡುವಂತೆ ಹೆಣ್ಣಿಗೆ ಎಲ್ಲ ಜೀವ ಜಂತುಗಳ ಆಸೆ ಹಾತೊರೆಯುತ್ತವೆ. ಅದುದಾಗಲಿ ದೇಹದ ಹಸಿವು ಹಿಂಗಿ



ಕೃತಜ್ಞತೆಯನ್ನು ಸಲ್ಲಿಸುತ್ತವೆ. ಗೌರವದಲ್ಲಿ ತೃಪ್ತಿಯಲ್ಲಿ ಎರಡು ಜೀವಗಳೂ ಒಂದೇ. ಒಂದೇ ನಾಣ್ಯದ ಎರಡು ಮುಖಗಳಂತೆ ಇದ್ದರೆ ಮಾತ್ರ ನಿಜವಾಗಿ ಬದುಕಿನ 'ಪುಣ್ಯ' ಆಗ ಗಂಡು ಹೆಣ್ಣು ಪರಸ್ಪರ ಪೂರ್ಣ. ಆಗ 'ನಾರಿ ಸ್ವರ್ಗಕ್ಕೆ ದಾರಿ' ವಿಷವಲ್ಲ, ಮಾದಕವಲ್ಲ, ಅಮೃತದಬಿಂದು, ತಾನು ಬದುಕಿ ತಾನೊಲಿದು ದನ್ನು ಬಾಳಿಸುವ ಸತ್ವ ಎರಡು ಜೀವಗಳನ್ನು ಒಂದೇ ಮನೆಯನ್ನು ಜೀವಂತ- ವಾಗಿ ಮಾಡುತ್ತದೆ. ಆಗ ನಾರಿ ಬರಿಯ ಹೆಣ್ಣಲ್ಲ ಗೃಹಿಣಿ, ತಾಯಿ, ದೇವಿ, ಆದರ್ಶನಾರಿ, ಆದ್ದರಿಂದ ಹಿಂದೂ ಸ್ತ್ರೀಯರು ಸಂಸಾರವನ್ನು ಸುಭದ್ರವಾಗಿಡುವ ತಮ್ಮ ಕರ್ತವ್ಯವನ್ನು ಕಡೆಗಣಿಸುವುದರಿಂದ ಎಂತಹ ಭೀಕರ ಪರಿಣಾಮವು ಕಾದಿದೆ ಎಂಬುದನ್ನು ಅರಿತುಕೊಳ್ಳಬೇಕಾಗಿದೆ. ಸಂಸಾರದಲ್ಲಿ ಸುಖ, ಶಾಂತಿ, ಸಮಾಧಾನ, ಸ್ಫೂರ್ತಿ, ನೀತಿ ಅವರನ್ನನುಸರಿಸಿ ನಿಂತಿದೆ. ಆದ್ದರಿಂದ ಹಿಂದೂ ಸಮಾಜದಲ್ಲಿ ಸ್ತ್ರೀ ತನ್ನ ಕರ್ತವ್ಯತೆಯನ್ನರಿತು ಸಂಸ್ಕೃತಿಯನ್ನು ತಿಳಿದು ನಡೆದ ದಿನವೇ ಜ್ಞಾನದ ನವೋದಯ ಸಮಾಜದ ಭಾಗ್ಯೋದಯ. ●

---

ಗ್ರಂಥಋಣ

೧) ಸಾಧನೆ.
೨) ಕರ್ನಾಟಕ ಸಂಸ್ಕೃತಿ
೩) ಗಾಂಧಿ
೪) ಅಲ್ಲಮನ ವಚನಗಳು
೫) ಬಸವಣ್ಣನವರ ವಚನಗಳು
೬) ಮನುಧರ್ಮ ಶಾಸ್ತ್ರ
೭) ವಚನ ಸಾಹಿತ್ಯ ಸಂಗ್ರಹ
೮) ಭಾರತದ ಇತಿಹಾಸ
೯) ಕಾಳಿದಾಸ
೧೦) ಹದಿಬದೆಯ ಧರ್ಮ

ಶ್ರೀ ರಸ್ತು

# ಶ್ರೀಮದುದ್ದಾನೇಶ್ವರ ಶತಕಂ



—ಲೇಖಕರು :— ಜಿ. ವಿ ರಾಜಶೇಖರಯ್ಯ, ನೆಲಮಂಗಲ

ಶ್ರೀ ಗುರುವೆ ಜಯರಾಜಶೇಖರ
ಆಗಮೋದಿತ ವಿಭವರಾಜಿತ
ಯೋಗಿಜನನುತ ಚರಣ ನಿಜವೈರಾಗ್ಯ ಶ್ರೀಕವಚ
ನಾಗನರಸುರದಾನವಾರ್ಚಿತ
ವಾಗಗೋಚರ ಗುಣಗಣಾಧೃತ
ನಾಗಮುಖಪಿತ ಶ್ರೀಮದುದ್ದಾನೇಶ ದಯವಾಗೈ ॥೧॥

ಕುಟಿಲಗೊಳೆ ಭ್ರೂಲತೆಯು ಚಟ ಚಟ
ರಜಪುವನ ಲಾಂಬಕಟಾಕ್ಷದೆ
ಕುಜಲಿಸುಮ ಶರನಾರ್ಭಟವ ಸುಟ್ಟುರುಹಿ ಕರುಣದಲೀ ।
ಕುಜಸಿವಾಸಿ ಜಟಾಮುಕುಟಮುನಿ
ಪಟಲಕಭಯವನಿತ್ತ ಪಟುಭಟ
ನಿಟಿಲನಯನರೂಪವುದ್ದಾನೇಶ ದಯವಾಗೈ ॥೨॥

ಲೌಕಕದನತನವರರಕಕೆವು
ನೂಕಿಜೀವನ ಕೊಂದು ಕೂಗೆವಿ
ವೇಕವಳಿದಾಕಾಲಕಾಮನುಕರ್ಮಕೊಳಗಾಗೇ ।
ಏಕಮೀಶ್ವರ ಭಕ್ತಿ ರಸಭವ
ನೌಕೆಯೆಂಬ ವಿವೇಕ ದೊರ್ದಿಪಿ
ನಾಕ ಪಾಣಿಯ ರೂಪನುದ್ದಾನೇಶದಯವಾಗೈ ॥ ೩ ॥

ಪಂಚಭೂತದ ಭುವನಗೇಹನೆ
ಪಂಚವಿಂಶತಿ ತತ್ವಕಾಯನೆ
ಪಂಚವರ್ಣ ವಿಲಾಸವೇದ್ಯನೆ ಪಂಚಕೋಶಗನೇ ।
ಪಂಚಬಾಣ ವಿಕಾರಜಿತಪ್ರಾ
ಪಂಚಕದಲೀಲಾ ವಿಭೂತಿಯೇ

ಪಂವಚುುಖ ಶಿವರೂಪನುದ್ದಾನೇಶ ದಯವಾಗೈ ॥ ೪ ॥
ಗುರುವೆ ಕರುಣಾಕರನೆ ಸಜ್ಜನ
ಪರವೆ ಸಂಸ್ಕೃತಿ ಹರನೆ ಶರಣಾ
ದರವೆ ವೇದದ ಶಿರನೆ ಜ್ಞಾನದ ಪರತರನೇ
ಮರವೆ ಮದ ಸಂಹರನೆ ಶಿವಮನು
ವರವೆ ಪುಣ್ಯದ ಕರುವೆ ಗುಣ ಸಾ
ಗರವೆ ಗುರುವರ ದೇವನುದ್ದಾನೇಶ ದಯವಾಗೈ ॥ ೫ ॥





# ಪ್ರಭಾವ

'ಭಗಿನಿ' ಎನ್.ಎಸ್. ಅಶ್ವತ್ಥ ಎಂ. ಎ. ಗುಬ್ಬಿ.

ಸಾಹಿತ್ಯ ಜೀವನದ ಪ್ರತಿಬಿಂಬ. ಸಾಹಿತ್ಯ ಬಿಟ್ಟು ಜೀವನವಿಲ್ಲ. ಜೀವನವಿಲ್ಲದ ಸಾಹಿತ್ಯವಿಲ್ಲ. ಅದು ಜನ ಜೀವನದ ದರ್ಪಣ. ಸಾಹಿತ್ಯ, ಸೂರ್ಯರಶ್ಮಿ ಇದ್ದಂತೆ. ಏಕೆಂದರೆ ಸೂರ್ಯನ ಕಿರಣಗಳು ಸೋಂಕದ ಸ್ಥಳವಿಲ್ಲ. ಎಲ್ಲೆಂದರಲ್ಲಿ ಒಳ-ಹೊರ, ಒಳ್ಳೆಯ-ಕೆಟ್ಟ, ದೊಡ್ಡ-ಚಿಕ್ಕ ಯಾವುದರ ಭೇದವೂ ಇಲ್ಲ ಎಲ್ಲ ಸ್ಥಳಗಳಲ್ಲೂ ತನ್ನ ಪ್ರಕಾಶವನ್ನು ಬೀರಿ, ಅಲ್ಲಿನ ಪೂರ್ಣ ಚಿತ್ರವನ್ನು ಎತ್ತಿ ತೋರಿಸುತ್ತದೆ. ಬೆಳಕು ಚೈತನ್ಯದಾಯಕ ಪ್ರಕೃತಿಯ ಎಲ್ಲಾ ಬಗೆಯ ಜೀವಿಗಳಲ್ಲೂ ಬಾಳಿನ ಚೇತನವನ್ನು, ಕತ್ತಲ ಭಯಾನಕ ಪರಿಸ್ಥಿತಿಯನ್ನು ದೂರಸರಿಸಿ, ನವ ಚೈತನ್ಯವನ್ನು ತುಂಬುತ್ತದೆ. ಇದು ಪ್ರತಿದಿನ, ಪ್ರತಿಯೊಂದು ಜೀವಿಯೂ ಕಾಣುವ ನಿತ್ಯ ಸತ್ಯ. ಜಗತ್ತಿನ ಎಲ್ಲ ಬಗೆಯ ವಹಿವಾಟಿಗೂ ಸೂತ್ರಧಾರವಿದ್ದಂತೆ. ಇದು ಜೀವನದ ಬೆಳಕಿಗೆ, ಕಾಯಕಕ್ಕೆ, ಚೈತನ್ಯಕ್ಕೆ ಮೂಲವಿದ್ದಂತೆ. ಹಾಗೆಯೇ ಬಾಳಿನ ಮಾನಸಿಕ ಚೈತನ್ಯಕ್ಕೆ ಮೂಲವಿದ್ದಂತೆ. ಹಾಗೆಯೇ ಬಾಳಿನ ಮಾನಸಿಕ ಚೈತನ್ಯ ಪ್ರಗತಿಗೆ ಸಾಹಿತ್ಯ ಅತಿಮುಖ್ಯ. ಇಂಥ 'ಸಾಹಿತ್ಯ ಸೂರ್ಯ' ನ ಪ್ರಭಾವ ಅತೀವ ಅದ್ಭುತ, ಅಗಮ್ಯ, "ರವಿ ಕಾಣದುದನು ಕವಿ ಕಾಣುತ್ತಾನೆ" ಎಂಬ ಅನುಭವಿಕ ವಾಕ್ಯ ಸಾಹಿತ್ಯದ ಔಚಿತ್ಯ, ಪ್ರಭಾವ, ಹಿರಿಮೆ, ಆದರಿಂದ ಜೀವನದ ಮೇಲೆ ಉಂಟಾಗುವ ಪ್ರಭಾವ ಪ್ರಾತಿನಿಧ್ಯಗಳ ಅರಿವು ದೃಗ್ಗೋಚರ.

ಚಾರಾಚರದ ಆಗುಹೋಗುಗಳಲ್ಲಿ, ನೋಟ ನಲಿವುಗಳಲ್ಲಿ ಪ್ರತಿಯೊಂದು ಜೀವಿಯೂ ಒಂದಲ್ಲ ಒಂದು ತೆರದಲ್ಲಿ ಭಾಗಿ, ಆದರೆ ಅವುಗಳಲ್ಲಿ ಮಾನವ ಚೇತನ ತನ್ನದೇ ಆದ ವಿಶಿಷ್ಟ ಶಕ್ತಿಯನ್ನು ಹೊಂದಿರುತ್ತದೆ, ಇಂತಹ ಚೈತನ್ಯಗಳಲ್ಲಿ ಅಪೂರ್ವ ಶಕ್ತಿಯನ್ನು ಹೊಂದಿರುವ ಚೈತನ್ಯಗಳೆ ಕವಿ ಚೈತನ್ಯಗಳು. ಎಲ್ಲಾ ಮಾನವರಂತೆ ಅವನಿಗೂ ಆಸೆ ಆಕಾಂಕ್ಷೆ ಮುಂತಾದುವುಗಳಿದ್ದರೂ. ಅವುಗಳಲ್ಲಿ ವಿಶೇಷ ರೀತಿಯ ಪ್ರತಿಭೆ, ಪ್ರಭಾವ ಆಕಾಂಕ್ಷೆಗಳನ್ನು ಹೊಂದಿರುತ್ತಾರೆ ಇಂತಹ ವಿಶಿಷ್ಟ ಚೈತನ್ಯಗಳೇ ಕವಿಗಳು. ಸಾಮಾನ್ಯನ ದೃಷ್ಟಿಕೋಣದಿಂದ ದೂರ ಸರಿದು; ನೋಡಿದ ಕೇಳಿದ, ಅನುಭವಿಸಿದ, ಜೀವನದ ಪ್ರಕೃತಿಯ ಪ್ರತಿವಸ್ತು, ಪ್ರಕೃತಿಯ ಪ್ರತಿವಸ್ತು ರೀತಿ-ನೀತಿ ಹಾವ-ಭಾವ ನೋಟ-ನುಡಿಗೆಗಳಲ್ಲೂ ವಿಶೇಷತೆಯನ್ನು ಕಾಣುತ್ತಾನೆ ಬಯಸುತ್ತಾನೆ, ಅದನ್ನೇ ಸಾಹಿತ್ಯದಲ್ಲಿ ಬಿಂಬಿಸುತ್ತಾನೆ. ಇದು ಯಾರಿಂದ ಕೊಟ್ಟ ಕೊಡುಗೆಯಲ್ಲ, ಉಡುವ ಉಡುಗೊರೆಯಲ್ಲ, ಅದು ಆಂತರಿಕ ಪ್ರತಿಭೆ. ಸುತ್ತಲ್ಲ ಎಲ್ಲ ಸನ್ನಿವೇಶಗಳೂ ಅದಕ್ಕೆ ಸಹಕಾರಿಯಷ್ಟೆ, ಅದು ಅಂತರ ಗಂಗೆಯಂತೆ. ಬುಗ್ಗೆಯಂತೆ, ಸಮಯಬಂದಾಗ, ಸ್ಥಳ ದೊರೆತಾಗ ತಾನೇ ಹೊರಹೊಮ್ಮುತ್ತದೆ. ಸುತ್ತಲ ಪರಿಸರ ಅದಕ್ಕೆ ಉಚಿತ ರೀತಿಯಲ್ಲಿ ಪೋಷಕವಾದ, ಆ ಬುಗ್ಗೆ ಹೊನಲಾಗಿ, ನದಿಯಾಗಿ ಸಮುದ್ರವನ್ನು ಸೇರುವ ತವಕದಿ, ವಿಶಾಲ ಪಾತ್ರದಿಂದ ವಿಜೃಂಭಿಸಿ, ಸೇರುವ ಶಕ್ತಿ ಪಡೆಯಬಹುದು. ಇದನ್ನು ಯಾರೂ ಅಲ್ಲಗಳೆಯುವಂತಿಲ್ಲ. ●

# ಪಾಠಶಾಲೆ ವಿದ್ಯಾರ್ಥಿ

—ಅ. ಬಿ. ಚನ್ನಬಸಪ್ಪ.
ರಿ॥ ಮುಖ್ಯೋಪಾಧ್ಯಾಯರು. ಶಂಕರ ಮಠ, 2 ನೇ ಕ್ರಾಸ್ ಕೋಟೆ, ಮೈಸೂರು–4

ಯಾವ ಪ್ರಾಣಿವರ್ಗವಾಗಲೀ , ಯಾವ ಸಸ್ಯವರ್ಗವಾಗಲೀ ಈ ಪಾಠಶಾಲೆ ಮತ್ತು ವಿದ್ಯಾರ್ಥಿಗಳು ಈ ಅಂಶಗಳಿಂದ ತಪ್ಪಿಸಿಕೊಳ್ಳಲು ಸಾಧ್ಯವೇ ಇಲ್ಲ. ಇಲ್ಲಿಯ ಉಪಾಧ್ಯಾಯರುಗಳು ದೈವಸಂಭೂತರು. ಆವರುಗಳಿಂದಲೇ ಚರಾಚರ ವಸ್ತುಗಳು ವಿಕಸಿತವಾಗುತ್ತಾ ಬರುತ್ತಿರುವುವು. ಈ ಶಕ್ತಿಗಳಿಂದಲೇ ಪ್ರಕೃತಿಯ (ಉಪಾಧ್ಯಾಯರುಗಳೇ) ಪ್ರಪಂಚವು ಕಾರ್ಯನಿರತವಾಗಿರುವುದು. ಚರಾಚರವಸ್ತುಗಳು ಕರ್ತವ್ಯ ನಿರತವಾಗಿರುವುವು.

ಆ ಉಪಾಧ್ಯಾಯರ ದರ್ಶನ ಪಡೆಯೋಣ ಗಾಳಿ-ನೀರು-ಅಗ್ನಿ-ಮಣ್ಣು-ಆಕಾಶ ಇವುಗಳು 'ದೈವದತ್ತವಾದಗುಣಗಳು. ಒಂದಕ್ಕೊಂದು ಸಹಕರಿಸಿ, ಚರಾಚರ ವಸ್ತುಗಳನ್ನು ಕಾಪಾಡುತ್ತಾ, ಬೆಳೆಸುತ್ತಾ, ನಾಶಗೈಯಿತ್ತಾ ಬರುತ್ತಿರುವುವು.

ಗಾಳಿ ಚಲಿಸುತ್ತೆ-- ಇದರಿಂದ ಉಸಿರಾಟ ನೀರು ಇದರಿಂದ ತನು. ಅಗ್ನಿ ಇದರಿಂದ ಶಾಖ, ಮಣ್ಣು ಚರಾಚರ ವಸ್ತುಗಳುಆಯಾಸ್ಥಳಗಳಲ್ಲಿ ನಿಲ್ಲಲು ಮತ್ತು ಕೆಲವು ಬೆಳೆಯಲು ಅವಕಾಶ. ಆಕಾಶ ಈ ಚರಾಚರದ ವಸ್ತುಗಳು ನುಗ್ಗಲು ಸ್ಥಳಮಾಡಿಕೊಡುವುದು. .

ಹಿಂದಿನ ಕಾಲ. ದೋಣಿಗಳು ಸಮುದ್ರಗಳಮೇಲೆ ಚಲಿಸಲಾರಂಭ. ಆಗ ಅಂಬಿಗರು ಗಾಳಿ ಬೀಸುವ ದಿಕ್ಕಿಗೆ ಹೋಗಲಾರಂಬಿಸಿದರು. ರೈತರು ಬೆಳೆದ ದವಸದಲ್ಲಿರುವ ಧೂಳು, ಹೊಟ್ಟು, ಕಸ, ಕಡ್ಡಿ ಮೊದಲಾದವುಗಳು ಬೇರ್ಪಡಿಸಲು ಗಾಳಿ ಬೀಸುವ ದಿಕ್ಕಿನ ಕಡೆಗೆ ತೂರುತ್ತಿದ್ದರು. ಅವರವರ ಕಸಬಿನ ಮಕ್ಕಳು, ದೋಣಿಯನ್ನು ಎದುರು ಗಾಳಿ ದಿಕ್ಕಿಗೂ ಹಾಗೆಯೇ ದವಸವನ್ನು ಎದರುಗಾಳಿ ದಿಕ್ಕಿಗೂ ತೂರಿನೋಡಿದರು; ದೋಣಿ ನಡಿಸಿದರು. ದೋಣಿಗಳು ಹಿಂದಹಿಂದಕ್ಕೆ ಬರಲಾರಂಭಿಸಿದವು: ದವಸವನ್ನುತೂರಿದಾಗ ಮಕ್ಕಳ ಮೈಮೇಲೆಯೇ ಧೂಳು ಹೊಟ್ಟುಗಳು ಬೀಳಲಾರಂಭಿಸಿದವು. ಆಗ ಅವರು ಅರಿತರು ಗಾಳಿಯ ಮರ್ಮವನ್ನು. ಗಾಳಿ ಅವರ ಭಾಗಕ್ಕೆ ಗುರುಗಳಾಗಲಿಲ್ಲವೆ ?

**ನೀರು:-** ಕಾಡಿನಜೀವನ ನದಿಯಪಕ್ಕದ ಗುಡಿಸಲಿನ ಬಾಲಕನು ತರಳಾಗಿ ಬಿದ್ದಿದ್ದ ಸೊಪ್ಪಿನ ಕಡ್ಡಿಕಾಳನ್ನು ತಿನ್ನಲು ಆತನಿಗೆ ಬಹಳಬಂಟಾಗಿ ಕಂಡಿತು. ನದಿಯ ಅಂಚಿನ ಮಡುವಿನಲ್ಲಿ ನೆಂದಿದ್ದ ಕಾಳನ್ನು ಕಂಡು ತಿನ್ನಲಾರಂಭಿಸಿದನು. ಅಗಿಯಲು ಸುಲಭವಾಗಿ ಕಂಡಿತು. ಅಗತಿಳಿದನು. ಕಾಳುಗಳನ್ನು ನೀರಿನಲ್ಲಿಟ್ಟರೆ ಉನಿಯುತ್ತೆ ಎಂಬ ಸಂಗತಿಯನ್ನು. ಜಿಂಕೆಗಳು ನೀರು ಕುಡಿಯುತ್ತಿದ್ದ್ದಾ. ಅದನ್ನು ನೋಡಿದ. ಕುತೂಹಲದಿಂದ ತಾನೂ ಕುಡಿದ. ತನ್ನಲ್ಲಿದ್ದ ಒಂದು ರೀತಿಯ ದಣಿವು ಮತ್ತು ಬಾಯಾರಿಕೆ ಪರಿಹಾರವಾದೊ! ಹಾಗೆಯೇ ಅದರ ಪ್ರತಿಯೊಂದು ಪ್ರಯೋಜನವನ್ನು ಅರಿತನು. ಅಲ್ಲಿಗೆ ನೀರು ಅವನ ಭಾಗಕ್ಕೆ ಗುರುವಾಗಲಿಲ್ಲವೆ ?

**ಅಗ್ನಿ :-** ಕಾಡು ಕುರುಬನ ಮುದ್ದಾದ ಹುಡುಗ. ಕಾಡುಕಿಚ್ಚು ಆರಿಹೋಗಿತ್ತು. ಆ ಅಗ್ನಿಗೆ ಸಿಕ್ಕಿ ಬೆಂದುಹೋಗಿದ್ದ ಒಂದು ಮೊಲವನ್ನು ಕಂಡನು. ಸುವಾಸನೆ ಹೊಡೆಯಿತು. ತಿಂದನು, ರುಚಿಯಾಗಿತ್ತು. ಆತನು ಅಲ್ಲಿಯತನಕ ಹಸಿಯ ಮಾಂಸವನ್ನು ತಿನ್ನುತ್ತಿದ್ದನು. ಆತನಿಗೆ ವ್ಯತ್ಯಾಸ ತಿಳಿಯಿತು ಈ ಘಟನೆಯು ಆ ಬಾಲಕನಿಗೆ ಅಗ್ನಿಯು ಗುರುವಾಗಲಿಲ್ಲವೆ ?

**ಮಣ್ಣು :-** ಕಾಡು, ಅಲ್ಲಿ ಗುಡಿಸಲು, ನದಿ, ಬೆಟ್ಟ-ಗುಡ್ಡ ಮೊದಲಾದವುಗಳು ಮಣ್ಣು (ಭೂಮಿ) ಮೇಲೆಯೆ ತಮ್ಮ ಕಾರ್ಯರಂಗ, ವೇದಾಂತವನ್ನು ಹೊಕ್ಕಿ ಎಕ್ಕಿ ನೋಡಿಧರೆ ಎಲ್ಲವೂ ಮಣ್ಣಿನಿಂದ-ಪುನಃ ಅವೆಲ್ಲವು ಮಣ್ಣಿನಲ್ಲಿಯೇ ಅಡಕ. ಜನರು ಆಲೋಚಿಸಲಾರಂಭಿಸಿದರು ತರ್ಕಿಸಿದರು, ಮಣ್ಣಿಲ್ಲದ ಪ್ರಪಂಚವಿಲ್ಲ. ಅಂದಮೇಲೆ ಭೂಮಿ (ಮಣ್ಣು) ನಮ್ಮ ಉಳಿವಿಗೆ ಬಹಳ ಮುಖ್ಯ ಎಂದು ತಿಳಿದರು. ಹೀಗೆ ನೋಡಿದರೆ ಮಣ್ಣು (ಭೂಮಿ) ಗುರುವಾಗಲಿಲ್ಲವೆ ?

**ಆಕಾಶ:-** ಚರಾಚರವಸ್ತುಗಳು ನಿಲ್ಲಲು-ಚಲಿಸಲು ಥಾಣ ಬೇಕು. ಭವನವನ್ನು ಅಂತಸ್ತು ಅಂತಸ್ತುಗಳನ್ನಾಗಿ ಕಟ್ಟುತ್ತಾ ಹೋದಹಾಗೆಲ್ಲ, ಅಡಚಣೆ ಇಲ್ಲದೆ ಅದ್ದಿ ಅಂತಕಗಳಲ್ಲಿದೆಏರಿಸಬಹುದು. ಆಕಾಶವಿಮಾನ, ಪಕ್ಷಿಗಳು ಹಾರಾಡಲು ಅವಕಾಶವಿರುತ್ತೆ. ಸೂರ್ಯಚಂದ್ರ ಮೊದಲಾದ ಗ್ರಹಗಳೂ, ನಕ್ಷತ್ರಗಳೂ ಚಲಿಸಲು ನಿಲ್ಲಲು ಅವಕಾಶ ಉಂಟು. ಇದೆಲ್ಲವನ್ನು ನೋಡಿದ ಮಂದಿಗಳು ಈ ವಿಚಾರ ವನ್ನು ತಿಳಿದರು.

ಅಂದ ಮೇಲೆ ಇದುಕೂಡ, ಗುರುವಾಗಲಿಲ್ಲವೆ ? ಪಾಠಶಾಲೆ ವಿಚಾರವನ್ನು ಕೆದಕಿ ಸುಜ್ಞಾನದಿಂದ ನೋಡಿದರೆ ನನಗೆ ತಿಳಿಯುವುದು ಒಂದು ಪ್ರಕೃತಿಯ ಪಾಠಶಾಲೆ



ಇನ್ನೊಂದು ಶಾಲೆ ಕೃತಕ ಪಾಠಶಾಲೆ. ಒಂದು ದೈವದತ್ತ ; ಇನೊಂದು ಮಾವನ-ದತ್ತ. ಈ ಎರಡರ ಲಕ್ಷಣಗಳನ್ನು ನೋಡಿದರೆ, ನನ್ನ ಅಲ್ಪ ಮತಿಗೆ ಅರಿವಾಗು-ವುದು ವಿಚಾರವಂತರು ಈ ವಿಚಾರದಲ್ಲಿ ನಿರ್ಮಲವಾದ ಹೃದಯದಿಂದ ಆಲೋಚಿಸಬೇಕು.

ಪ್ರಪಂಚವೆಂಬ ಪಾಠಶಾಲೆಯಲ್ಲಿ ಸದಾ ಬಾಗಿಲು ತೆರೆದಿರುತ್ತೆ, ಇಲ್ಲಿ ರಜವಿಲ್ಲ. ಗೊತ್ತಾದ ಫಾರಂ ಇಲ್ಲ. ಶುಲ್ಕವಿಲ್ಲ. ಜಾತಿ ಭೇದವಿಲ್ಲ. ಹಿಂದು-ಮುಸಲ್ಮಾನ ; ಜೈನ-ಬುದ್ಧ : ಸಿಕ್ಕ-ಪಾರಶಿಕ : ಕ್ರಿಶ್ಚಿಯನ್-ನಾನ್ ಕ್ರಿಶ್ಚಿಯನ್-ಎಂಬುದಾಗಿ. ನೋಡುವುದಿಲ್ಲ. ಬಣ್ಣ ಭೇದ ಇಲ್ಲ. ಕಪ್ಪು-ಬಿಳಿ-ತಾಮ್ರ ಬಣ್ಣ ಮೊದಲೆ ಮುಂತಾಗಿ ರಾಷ್ಟ್ರ ಭೇದವಿಲ್ಲ. ನಮ್ಮ ರಾಷ್ಟ್ರ-ಪರ ರಾಷ್ಟ್ರ ಎಂಬುದಾಗಿ, ಬಡ-ಬಲ್ಲಿದವ :- ಉಚ್ಚ ನೀಚ : ನನ್ನವ-ಬೆರೆಯುವ. ಹಿಂದುಳಿದ ಜನಾಂಗ ಮುಂದುವರಿದ ಜನಾಂಗ ವಾರ್ಷಿಕ ವರಮಾನ-ಅಳತೆಯೊಳಗೆ ; ಅಳತೆ ಮೀರಿರುವುದು. ಗುರ್ತಿನ ಚೀಟಿ ತಂದಿ-ರುವವನು ; ಬರಿಗೈಯಲ್ಲಿ ಬಂದಿರುವವನು , ಲಂಚ ಕೊಡುವವನು ; ಕೊಡದೆ-ಇರುವವನು ಮೊದಲಾದ ಭೇದ ಭಾವಗಳಿರುವದಿಲ್ಲ.

ಈ ವಿಶ್ವ ಪಾಠಶಾಲೆಯಲ್ಲಿ ಎಂಥಸಮತಾ ಪಾಠ!ಗಾಳಿ **ಎಂಬ ಗುರುವು** ಹೊಲಗೇರಿ-ಶಿವಗೇರಿ-ವೈಷ್ಣವ ಗೇರಿ-ಬಡಗೇರಿ ಬಲ್ಲಿಗರಗೇರಿ ಎಂಬ ಭೇದ ಭಾವವಿಲ್ಲದೆ ಸದಾ ಬೀಸುತ್ತಿರುವುದು ! **ನೀರು** ಕೆರೆ ಕುಂಟೆ ಹೊಳೆ ಸಮುದ್ರ ಎಂಬ ಭೇದ ಭಾವವಿಲ್ಲದೆ ಬಂದವರೆಲ್ಲರಿಗೂ ಅವರವರು ತೃಪ್ತಿಯಾಗುವತನಕ ಒಲಿಯುತ್ತಿರುವುದು, ಆ ಗಂಗಾಮಾತೆ ಎಲ್ಲರಿಗೂ ಮಾತೆಯಾಗಿರುವಳು.

**ಅಗ್ನಿ ಗುರುವು** ಬಡವನ ಒಲೆಯನ್ನು ಶಾಖಮಾಡುವನು. ಬಲ್ಲಿದವನ ಮನೆಯ ಒಲೆಯನ್ನು ಕೂಡ ಶಾಖಮಾಡುವನು. ಅಗ್ನಿ ಎಲ್ಲರಿಗೂ ಒಂದೇ !

**ಮಣ್ಣು (ಭೂಮಿ)** ಇದು ಹೊಲಗೇರಿಗೂ ಒಂದೇ : ಶಿವಾಲಯಕ್ಕೂ ಒಂದೇ; ಬಡವ ಸಸಿಯನ್ನು ತೋಟದಲ್ಲಿ ನೆಟ್ಟರೆ ಆ ಮಣ್ಣಿನ ಭಾಗಕುಸಿಯುವುದಿಲ್ಲ. ಆ ಸಸಿ ಬೆಳೆಯುತ್ತದೆ. ಬಲ್ಲಿದವ ತನ್ನ ತೋಟದಲ್ಲಿ ನೆಟ್ಟರೆ ಆ ಮಣ್ಣಿನ ಭಾಗ ಹೊನ್ನಾಗುವುದಿಲ್ಲ. ಮಣ್ಣಾಗಿಯೇ ಉಳಿಯುವುದು. ಆ ಸಸಿಯೂ ಕೂಡ ಬೆಳೆಯುವುದು. ಆ ಮಣ್ಣು ನನ್ನನ್ನು ಬಲ್ಲಿದವನು ಮುಟ್ಟಿದನು ನಾನು ಪಾವನನಾದೆ ಎಂದು ಹೆಮ್ಮೆ ಪಡುವುದಿಲ್ಲ. ಆ ಬಡವನು ಮುಟ್ಟಿದ ಮಣ್ಣು ಯಾವ ರೀತಿಯಲ್ಲಿರುತ್ತೊ ಅದೇ ರೀತಿಯಲ್ಲಿ ಇರುತ್ತೆ. ಅಂದ ಮೇಲೆ ಮಣ್ಣಿನಲ್ಲೂ ಭೇದ ಭಾವವಿರು-ವುದಿಲ್ಲ. ಎಲ್ಲರೂ ಮಣ್ಣಿನಿಂದಲೆ ಬಂದರು ಅಂದರೆ ಹೆತ್ತಮಾತೆಯು ಭೂಮಿಯ ಮೇಲೆ ವ್ಯವಹಾರ. ಆಕೆಯ ಉದರದಿಂದ ಬಂದರುಕೂಡ ಮಣ್ಣಿನಿಂದ ಬಂದ ಹಾಗಾಯಿತು.

ಈ ಪಾಠಶಾಲೆಯ ಸಮತಾವಾದ ಮತ್ತು ಗುರುಗಳು ಎಂಥ ಧರ್ಮದ-ಹೃದಯಿಗಳು !

ಆಕಾಶ:- ಇದರಲ್ಲಿ ಕಾಗೆಗೂ ಹಾರಲು ಅವಕಾಶ: ಕೋಗಿಲೆಗೂ ಧ್ವನಿಗೈಯುತ್ತಾ ಹಾರಾಡಲು ಅವಕಾಶ. ಆಕಾಶವು ಕಾಗೆಯು ನನ್ನ ವಾತಾವರಣಕ್ಕೆ ಬಂತೆಂದು ಕೋಪಗೊಂಡು ಆ ಕಾಗೆಯನ್ನು ಸುಟ್ಟು ಭಸ್ಮ ಮಾಡುವುದಿಲ್ಲ. ಕೋಗಿಲೆಯನ್ನು ಸ್ವಾಗತಿಸಿ ರತ್ನವನ್ನಾಗಿಮಾಡುವುದಿಲ್ಲ! ಭರತ ಮಾತೆಯರು ಆಕಾಶಯಾನವನ್ನು ಮಾಡುವುದಾದರೆ ಅವರಿಗೆ ಹೆಚ್ಚಿಗೆ ಅವಕಾಶ ಮಾಡಿಕೊಡುವುದಿಲ್ಲ ; ಪಾಕಿಸ್ಥಾನದವನು ಯಾನವನ್ನು ಬಿಟ್ಟರೆ, ಅದನ್ನು ಆಕಾಶವು ಆಕ್ರೋಷದಿಂದ ಸನೆಬಡಿಯುವುದಿಲ್ಲ. ನೋಡಿದಿರಾ ! ಈ ಸಮತಾ ಗುಣವುಳ್ಳ ಪಾಠಶಾಲೆಯನ್ನು ! ಅದಕ್ಕೆ ಯಾವ ಸರ್ಕಾರದಿಂದಲೂ ಸನ್ನದ್ದು ಬೇಕಿಲ್ಲ. ಅನುದಾನ ಮೊದಲೆ ಬೇಕಿಲ್ಲ! ಈ ಶಾಲೆ ನಮ್ಮಿಂದ ಕೇಳುವುದು ಒಂದೇ ಒಂದು. ಅದು ಯಾವುದೆಂದರೆ ಉತ್ತಮವಾದ ಗುಣ!

ನಾವೆಲ್ಲರೂ ಇಂಥಾ ಪವಿತ್ರವಾದ ಶಾಲೆಯಲ್ಲಿದ್ದೇವೆ. ಇದನ್ನು ಹೊಲಸು ಮಾಡಿ ನಾವು ಹೊಲಸು ವಿದ್ಯಾರ್ಥಿಗಳಾಗಬಾರದು. "ಇಲ್ಲಿ ಸಲ್ಲುವವನು ಅಲ್ಲಿಯೂ ಸಲ್ಲುವನು" ಆದುದರಿಂದ ಉತ್ತಮ ವಿದ್ಯಾರ್ಥಿಗಳಾಗೋಣ! ಎಲ್ಲೆಲ್ಲೂ ಸಲ್ಲೋಣ !

ಇನ್ನು ಮುಂದೆ ಮಾನವನಿಂದ ರಚಿತವಾದ ಪಾಠಶಾಲೆ ಕಡೆ ಪ್ರಯಾಣ ಮಾಡೋಣ. ಅಯ್ಯೋ! ಅದಕ್ಕೆ ನನ್ನ ಮನಸ್ಸು ಒಪ್ಪುವುದಿಲ್ಲವಲ್ಲ! ವಿಧಿಯಿಲ್ಲ! ಇದ್ದ ಸಂಗತಿಯನ್ನು ಇದ್ದ ಹಾಗೆಯೇ ಬರೆಯಬೇಕು ತೋರಿಸಬೇಕು. ಸತ್ಯ ನುಡಿಯಲು ಅಂಜಿಕೆ ಏಕೆ ? ಹೆದರಿಕೆ ಏಕೆ ? ಎಂದಿದ್ದರೂ ಒಂದು ದಿನ ಸಾಯಲೇ ಬೇಕು ! ಆದರೆ ಹೇಡಿಯ ಸಾವು ಬೇಕಿಲ್ಲ. ನೆಮ್ಮದಿಯ ಸಾವು ಬೇಕು. ಆ ಸಾವು, ಪುಕಸಟ್ಟೆ ಸಿಕ್ಕುವುದಲ್ಲ-ಲಂಚದ ಲೋಕದಲ್ಲ ! ಹಾಗಾದರೆ ಅದಾವುದು ?

ಮಾನವ ನಾಲ್ಕು ಗೋಡೆಗಳಮಧ್ಯೆ ನಿರ್ಮಿಸಿಕೊಂಡಿರುವಶಾಲೆ. ವೇದಿಕೆಯ ಮೇಲೆ ಹೇಳುವುದು-ಪುಸ್ತಕಗಳಲ್ಲಿ ಬರೆಯುವುದು ಒಂದು: ಕಾರ್ಯ ರಂಗದಲ್ಲಿ (ಶಾಲೆಯಲ್ಲಿ) ನಡೆಯುವುದೊಂದು. ಇದು ಸರ್ಕಾರ! ಸರ್ಕಾರದ ಶಿಸ್ತು ! ನಾನು ಕೂಡ ಉಪಾಧ್ಯಾಯನಾಗಿದ್ದೆ. ನನ್ನ ಕೈಲಾದ ಮಟ್ಟಿಗೆ ಅಲ್ಲಿ ನಡೆಯುವುದನ್ನು ಕಣ್ಣಾರೆ ನೋಡಿದೆ! ಅನುಭವಿಸಿದೆ! ಒಂದು ಕಣ್ಣಿಗೆ ಬೆಣ್ಣೆ ಒಂದು ಕಣ್ಣಿಗೆ ಸುಣ್ಣ !



ಸೂರ್ಯನಿಂದ ಸಹಸ್ರ ಕಿರಣಗಳು ಹೊರಬೀಳುತ್ತವೆ. ಅವುಲೋಕಕಲ್ಯಾಣಕ್ಕೆ ಆದರೆ ಈ ಕೆಲವು ವಿದ್ಯಾಸಂಸ್ಥೆಗಳಿಂದ ಒಂದು ಕೈಯಲ್ಲಿ ಬೆಣ್ಣೆ; ಇನ್ನೊಂದರಲ್ಲಿಸುಣ್ಣ! ಅಯ್ಯೋ! ಒಂದುಘಟನೆಯನ್ನು ಕೆಲವಾರು ವರ್ಷಗಳಿಂದ ಪಿ ಯು ಸಿ ಕೊನೆವರ್ಷದ ಪರೀಕ್ಷೆಯ ಅಂಕಗಳ ಪಟ್ಟಿಇಬ್ಬರದನ್ನುನೋಡಿದೆ. ಒಬ್ಬನದು 40% ಇನ್ನೊಬ್ಬನದು 80%-40% ನ್ನು ಪಡೆದವನಿಗೆ ಬಿ. ಇ. ಗೆ ಸೀಟು 80%ನ್ನು ಪಡೆದವನಿಗೆ ಸೀಟು ಸಿಗಲಿಲ್ಲ. ಸರ್ಕಾರಕೊಡಲಿಲ್ಲ. ಈತನು ಕಣ್ಣೀರುಸುರಿಸಿದನು ಬಿ ಎಸ್ಸಿಗೆ ಸೇರಿಕೊಂಡನು ಆತನು 40% ಇಂಜಿನೀಯರನಾಗಿ ಕೆಲಸ. ಇನ್ನೊಂಬಅಂದರೆ ಈತನ 2ರಷ್ಟು ಅಂಕಗಳನ್ನು ಪಡೆದವನು ಬಹುಶಃ ಆತನ ಆಫೀಸಿನಲ್ಲಿಯೇ ಗುಮಾಸ್ತನಾಗಿ ಕೆಲಸ ಮಾಡುತ್ತಿರಬಹುದು ! ಇದೆಲ್ಲವೂನಾವು ರಚಿಸಿಕೊಂಡಿರುವ ಪಾಠಶಾಲೆಯ ವೈಖರಿಯ ಆಧುನಿಕಧರ್ಮ ಈಘಟನೆಯಲ್ಲದೆ ಇನ್ನೂ ನಾನಾರೂಪಗಳು ನನ್ನ ಮನಸ್ಸಿನ ಹಸಿಯ ಪರದೆಯಮೇಲೆ ಚಿತ್ರಚಿತ್ರವಾಗಿಬಂದು ಹಾಸ್ಯಗೈ ಯುತ್ತಾ ಹೋಗುತ್ತಿರುವುವು. ಅವುಗಳನ್ನೆಲ್ಲಾ ತಿಳಿಸುತ್ತಾ ಹೋಗುವುದಾದರೆ ನನ್ನಕಣ್ಣೀರಿಗೆ ಬದಲಾಗಿ ದುಃಖದ ವ್ಯಸನದ ರಕ್ತಸುರಿಯಲಾರಂಭಿಸುವುದಲ್ಲದೆ ಬರೆಯುವ ಪೆನ್ನಿಂದ ಈ ರೀತಿಯ ಶಾಯಿಗೆ ಬದಲಾಗಿ ರಕ್ತದಶಾಯಿ ಬರಲಾರಂಭಿಸುವು ದೇನೊ ? ಇದುನಮ್ಮ ಕೃತಕ-ಶಾಲೆಯವೈಕರಿ!ಧರ್ಮ! ಇದರಿಂದಲೆ ಎಲ್ಲೆಲ್ಲೂ ಮುಷ್ಕರ ಲಂಚ, ಮೋಸ, ದೊಂಬಿ ಲಾಟಿಚಾರ್ಜ್- ಟಿಯರ್‌ಗ್ಯಾಸ್ - ಫೈರಿಂಗ್ : ಇವೆಲ್ಲವೂ ವಿದ್ಯಾರ್ಥಿಗಳ ಜೀವನದ ಸಮಸ್ಯೆಯಾದರೆ, ಅವರ ಮಾತಾ ಪಿತೃಗಳು ಪೋಷಕರು ಹಿತೈಷಿಗಳು ಶಾಲೆ ಶಾಲೆಗೂ ವಿಶ್ವವಿದ್ಯಾಲಯಗಳ ಕ್ಷೇತ್ರಗಳಿಗೂ ತೈಲಿಗಳೊಡನೆ ಯಾತ್ರೆ. ಅವರುಗಳ ದೃಶ್ಯಚರಿತ್ರಾರ್ಹವಾದುದು. ಅಂಗಡಿಗಳಿಗೆ ಕೊಡಬೇಕಾದ ಹಣವನ್ನು ಸಾಲ ಸೋಲ ಮೊದಲಾದುವುಗಳನ್ನು ಮಾಡಿ ಸುಂಡಿಹೋದ ಈ ಹಿರಿಯರ ಸ್ಥಿತಿ-ಗತಿಗಳನ್ನು ನೋಡಿದ ಅವರ ಮಕ್ಕಳು ಕೆಲಸಕ್ಕೆ ಸೇರಿದ ಮೇಲೆ ಈ ರೀತಿ ಹುಲಿ-ಸಿಂಹಗಳು ತಮ್ಮ ಆಹಾರಕ್ಕೆ ಹೊಂಚು ಹಾಕುತ್ತಿರುವುದು. ಸ್ವಾಭಾವಿಕ! ಆದರೆ ಈ ವ್ಯಕ್ತಿಗಳು ಸುಲಿಗೆಗೆ (ಲಂಚ) ಹೊಂಚು ಹಾಕುವರು ಆದರೆ ಇದಕ್ಕೆ ಅಳತೆಯೇ ಇಲ್ಲ ! ಆ ಹುಲಿ ಸಿಂಹಗಳು ಹೊಟ್ಟೆ ತೃಪ್ತಿಯಾದರೆ ತಮ್ಮ ಬೇಟೆಯನ್ನು ನಿಲ್ಲಿಸಿ, ಗುಹೆಗಳಲ್ಲಿ ನೆಮ್ಮದಿಯಾಗಿರುವುವು. ಆದರೆ ಇವರುಗಳಿಗೆ ಅಳತೆ ಎಲ್ಲಿಂದ ಬಂತು!

ನನ್ನ ಪೆನ್ನು ತಿಳಿಸುತ್ತಿರುವುದು ಸುಳ್ಳಲ್ಲ ಇದ್ದ ಸಂಗತಿಯನ್ನು ತಿಳಿಸುತ್ತಿರುವುದು. ಈ ಸರಸ್ವತಿಯ ಆಯುದಕ್ಕೆ ಯಾವ ಆಸೆ-ಆಶೋತ್ತರಗಳಿಲ್ಲ. ಆದರೆ ಅದಕ್ಕಿರುವುದು ಒಂದೇ ಒಂದು ಅದು ಧರ್ಮದ ಮಾರ್ಗ !

ಅನೇಕರಿಗೆ ಇದು ಹಿಡಿಸದೆ ಇರಬಹುದು. ಆದರೆ ಪೆನ್ನು ಮಾತ್ರ ಹಿಂಜರಿಯಲಾರದು. ದಾ.ರಾ. ಬೇಂದ್ರೆಯವರು-ಕೆ. ವಿ. ಪುಟ್ಟಪ್ಪನವರು-ಮಾಸ್ತಿಯ-

ವರು.......ಮೊದಲಾದವರು ಯಾವ ಅಂಜಿಕೆ, ಹೆದರಿಕೆಗಳಿಲ್ಲದೆ ನಾನಾ ಮುಖ- ಗಳಿಂದ ಬರೆದಿಲ್ಲವೆ? ಪುರಾತನ ಕಾಲದ ಪೇನನ್ನು ನೋಡಿದರೆ ಎದೆ ಜಗ್ ಎನ್ನುವುದು. ವಾಲ್ಮೀಕಿ-ವ್ಯಾಸರು ಪಂಪ-ಹರಿಹರ-ರಾಘವಾಂಕ-ಬಸವ-ಮಹಾತ್ಮ ಗಾಂಧಿ ಮೊದಲಾದವರ ಪೇನುಗಳ ವೈಖರಿಗಳನ್ನು ನೋಡಿದರೆ ಆಗಿನ ಋಷ್ಯಾ ಶ್ರಮದ ಪಾಠಶಾಲೆಗಳು ಯಾವ ಚಿತ್ರಗಳನ್ನು ತೋರಿಸುವುವು ? ಈಗಿನ ನಮ್ಮ ಸ್ವಾರ್ಥಿಯ ಬೀಜಗಳಿಂದ ಮೊಳಕೆಯೊಡೆದು ಹೆಮ್ಮರಗಳಾಗಿ ಬೆಳೆದಿರುವ ಪಾಠ ಶಾಲೆಗಳು ವಿದ್ಯಾರ್ಥಿಗಳನ್ನು ಭ್ರಷ್ಟಾಚಾರಕ್ಕೆಳೆಯುವ ಗುಹೆಗಳಾಗಿರುವುವು. ದೊಡ್ಡವರನ್ನು ಕರಳಿಸುವ ಕೂಪಗಳಾಗಿರುವುವು.

ನಮ್ಮ ಈ ಪಾಠಶಾಲೆಗಳಲ್ಲಿ ನಡೆಯುವ ಅವಿವೇಕ ಹೇಳತೀರದು. ದೂರದ ಬೆಟ್ಟ ನುಣ್ಣಗೆ ಎಂಬಂತೆ ಆಗಿರುವುದು. "ಬಲ್ಲವನೇ ಬಲ್ಲ ಬೆಲ್ಲದ ರುಚಿ !" ಇದರಲ್ಲಿ ವಿಶಾಲವಾದ ಅರ್ಥ ಅಡಕವಾಗಿದೆ. ಮುಖ ನೋಡಿ ಮಣೆ ಹಾಕು ವಂತೆ ಅಲ್ಲಿಯ ವ್ಯವಸ್ಥಾಪಕರು. ಇವ ನಮ್ಮವ-ಅವನಮ್ಮವನಲ್ಲ ; ಇವ ಈಜಾತಿ-ಅವ ಆಜಾತಿ : ಇವ ನಮ್ಮ ಓಟುದಾರ-ಅವ ನಮ್ಮ ಓಟುದಾರನಲ್ಲ! : ಈ ಕಲ್ಮಶದ ಅಳತೆ ಪಟ್ಟಿಯಿಂದ ಪಾಠಗಳ ಹಂಚಿಕೆ-ತರಗತಿಗಳ ಹಂಚಿಕೆ ! ವ್ಯವ ಹಾರಗಳು ನಡೆಯುವುವು.

ವಿದ್ಯಾರ್ಥಿಗಳು ಪೆದ್ದರಲ್ಲ. ತಿಳಿಯಲು ಬಂದಿರುವವರು ಇವೆಲ್ಲವನ್ನು ನೋಡಿ ತಾವೂ ಅದೇ ರೀತಿಯ ಮಾರ್ಗಗಳನ್ನನುಸರಿಸುವರು " ಇಲ್ಲಿ ಸಲ್ಲುವ- ಅಲ್ಲೂ ಸಲ್ಲು- ವನು ! ಇಲ್ಲಿ ಸಲ್ಲದವ-ಅಲ್ಲೂ ಸಲ್ಲಲಾರ ! " ಹಾಗೆಯೇ ಆಗುತ್ತಿರುವುದು. ಆದ್ದರಿಂದ ಈ ನಮ್ಮ ಪಾಠಶಾಲೆಗಳು ಕೆಳದರ್ಜೆ ಮಕ್ಕಳೇನು ಮಾಡುವರು? "ಹಿರಿಯಕ್ಕನ ಚಾಳಿ ಮನೆಯವರಿಗೆಲ್ಲ " ಎನ್ನುವಂತೆ ಆಗುತ್ತಿರುವುದು. ಇಲ್ಲಿ ಯಾರನ್ನು ಹೀಯಾಳಿಸಬೇಕು ? ಇದಕ್ಕೆ ಉತ್ತರವನ್ನ ವೇನ ತಿಳಿಸ ಬೇಕಿಲ್ಲ. ಸೂರ್ಯನಿಂದ ಬೆಳಕು-ಶಾಖ ಬರುತ್ತೆ ಎಂಬ ಸಂಗತಿ ಪ್ರತಿಯೊಬ್ಬರಿಗೂ ತಿಳಿದಿರುವಂತೆ ತಿಳಿದಿರು- ವುದು ! ಆಗಲಿ ಹೇಳಿಬಿಡೋಣ. " ರಾಜಕೀಯ, ಸೂಕ್ತವ್ಯಕ್ತಿಗಳು ಕಣ್ಮರೆ- ಯಾದರು ಕೆಲವರು ಇನ್ನು ಎಲೆಮರೆಯ ಕಾಯಿಗಳಂತೆ ಮನೆಗಳಲ್ಲಿ ಕುಳಿತು ವ್ಯಸನ ದಿಂದ, ನೋಡುತ್ತಿರುವರು. ಒಂದು ವೇಳೆ ಹೊರ ಬಂದು ಧರ್ಮ ಬೀರಲಾರಂಭಿಸಿ ದರೆ, ಆತನ ಎದೆಗೆ ಚೂರಿ ! ಆತನು ಚೂರಿಗೆ ಹೆದರುವುದಿಲ್ಲ, ಒಂದಕ್ಕೆ ಅಂಜುತ್ತಾನೆ, ಒಂದು ತನ್ನನ್ನು ನಂಬಿಕೊಂಡಿರುವ ಮಂದಿಗೆ-ತಾನ ಕೈಹಿಡಿದ ಪತ್ನಿಗೆ. ಎಂದಿದ್ದರು ನಾವು ಒಂದುದಿನ, ಯಮಪುರಿಗೆ ಪ್ರಯಾಣ ಮಾಡಲೇಬೇಕು ! ಇದು ಅವರಿಗೆ ಗೊತ್ತು ! ಈ ಪ್ರಬಂಧದ ಲೇಖನ ಮುಂದಿನ ಪ್ರಯಾಣದ ಘಟನೆಗಳನ್ನು ತಿಳಿಸು- ವುದು. ಕ್ಷಮಿಸಿ !



# ಪಂಪ ಭಾರತದ ಕೆಲವು ಮಹತ್ವ ಪ್ರಸಂಗಗಳು

—ಕೆ. ವೈ. ಶಿವಕುಮಾರ್

ಕನ್ನಡ ಅಧ್ಯಾಪಕ, ಅಂಚೆ ಮತ್ತು ತೆರಪಿನ ಶಿಕ್ಷಣ ಸಂಸ್ಥೆ, ಮೈಸೂರು-6

ಈ ವಿಷಯ ತಿಳಿಯದೆ ಇದ್ದಿದ್ದರೆ ನಿರ್ದಾಕ್ಷಿಣ್ಯವಾಗಿ ಅವರನ್ನು ಕೊಲ್ಲಬಹುದಿತ್ತು. ಕೃಷ್ಣ ಯಾಕಾದರೂ ಇದನ್ನು ಹೇಳಿದನೊ, ಹೀಗೆ ಕರ್ಣ ಸಂಕೀರ್ಣ ಭಾವನೆ- ಗಳಿಗೊಳಗಾದನು ದುರ್ಯೋಧನನಿಗೆ ತನ್ನ ಜನ್ಮವೃತ್ತಾಂತ ಈಗಾಗಲೆ ತಿಳಿದಿದ್ದೂ ಆತ ತನಗೆ ಹೇಳದೆ ಮುಚ್ಚಿಟ್ಟನಲ್ಲ ಎಂಬುದರ ಬಗ್ಗೆ ಕರ್ಣನ ಪ್ರತಿಕ್ರಿಯೆ ಏನೂ ಇಲ್ಲ. ಆತ ತನಗೆ ಮಾಡಿರುವ ಉಪಕಾರ, ತೋರಿಸಿದ ಸ್ನೇಹಪ್ರೇಮ, ಈಗ ಆತನಿಗೆ ಅದರ ಋಣವನ್ನು ತೀರಿಸಲಾಗುವುದಿಲ್ಲವಲ್ಲ, ಅವನ ಆಸೆಯನ್ನು ಮನಃಪೂರ್ವಕವಾಗಿ ಈಡೇರಿಸಲಾಗುವುದಿಲ್ಲವಲ್ಲ-ಇವುಗಳ ಬಗ್ಗೆಯೆ ಚಿಂತಿಸುತ್ತಾನೆ. ತಾನು ದಾಯಾದಿಯಾಗಿದ್ದರಿಂದ ದುರ್ಯೋಧನ ಅಂತಃಪುರದವರೆಗೆ ತನಗೆ ಅವಕಾಶ ಮಾಡಿಕೊಟ್ಟಿದ್ದು, ಇಲ್ಲದಿದ್ದರೆ ಪ್ರವೇಶ ಕೊಡುತ್ತಿದ್ದನೆ ಎಂದೂ ಯೋಚಿಸುವುದಿಲ್ಲ. ತನ್ನ ಸ್ವಾಮಿಗಾಗಿ ಪ್ರಾಣವನ್ನು ಬಿಡಲು ಸಿದ್ಧನಾಗುತ್ತಾನೆ. ಪಾಂಡವರ ಕಡೆಗೆ ಹೋದರೆ ಪ್ರಾಣ ಉಳಿಸಿಕೊಳ್ಳಬಹುದಲ್ಲದೆ ರಾಜನಾಗಬಹುದಲ್ಲ ಎಂದು ಚಿಂತಿಸು- ವುದಿಲ್ಲ. ಇವನು ದುರ್ಯೋಧನನಿಗೆ ಈ ವಿಷಯವನ್ನು ತಿಳಿಸಿ ಒಂದು ಮಾತಿನಲ್ಲಿ ಮಹಾಭಾರತಯುದ್ಧವನ್ನು ನಿಲ್ಲಿಸಬಹುದಿತ್ತು. ತನ್ನ ಜನ್ಮವೃತ್ತಾಂತವನ್ನು ದುರ್ಯೋಧನ ತಿಳಿದಿರುವುದನ್ನು ತಾನು ತಿಳಿದಮೇಲೂ ಆ ಬಗ್ಗೆ ದುರ್ಯೋಧನನನ್ನು ಒಂದು ಮಾತೂ ಕೇಳುವುದಿಲ್ಲ. ಎರಡು ಕಡೆಗೂ ತೋರಿಸಿಕೊಳ್ಳದೆ ಇದ್ದು- ಬಿಡುತ್ತಾನೆ

ಕರ್ಣ ಕೃಷ್ಣನಿಗೆ 'ಈಗಲೆ[ಯುದ್ಧಕ್ಕೆ ಮೊದಲೆ] ನೀವು ನನಗೆ ಇದನ್ನು ಏಕೆ ಹೇಳಿದಿರೊ, ಕೀರ್ತಿ ಹೊಗಳಿಕೆಯನ್ನು ಪಡೆಯುವಂತೆ [ದುರ್ಯೋಧನ ತನಗೆ ಮಾಡಿದ್ದನ್ನೆಲ್ಲ ಇದಿಷ್ಟರಲ್ಲೆ ಹೇಳಿದ್ದಾನೆ] ದುರ್ಯೋಧನನ ನನಗೆ ಒಳ್ಳೆಯದನ್ನು ಮಾಡಿದ ಕಾರ್ಯವನ್ನು ಪಕ್ಕಕ್ಕೆ ಸರಿಸಿ, ಕೀರ್ತಿ ಮಾಸುವಂತೆ ನೆಂಟನ ನೆಪದಿಂದ ಪಾಂಡವರ ಕಡೆಗೆ ನಾನುಸೇರಿದರೆ [ಕೌರವರಿರಲಿ] ನೀವೆ ನನ್ನ ಬಗ್ಗೆ ಹೇಸಿಗೆ ಪಟ್ಟು ಕೊಳ್ಳುವುದಿಲ್ಲವೆ, ಎಂದು ಹೇಳಿ, (ವ್ಯಾಸಭಾರತದಲ್ಲಿ ಕೃಷ್ಣ ಹೀಗೆ ಜನ್ಮವೃತ್ತಾಂತವನ್ನು ಹೇಳಿದಾಗ ಕರ್ಣ, ಇದು ನನಗೆ ಮೊದಲೇ ತಿಳಿದಿತ್ತೆನ್ನುತ್ತಾನೆ.

ಅಲ್ಲಿ ಹೀಗೆ ಮನ ಮಿಡಿಯುವ ಪ್ರಸಂಗವಿಲ್ಲ. ಕರ್ಣನ ಜನ್ಮವೃತ್ತಾಂತ ದುರ್ಯೋಧನನಿಗೆ ತಿಳಿದಿತ್ತೆನ್ನುವ ಪ್ರಸಂಗವೂ ಇಲ್ಲ) ದುರ್ಯೋಧನನ ಮತ್ತು ತನ್ನ ಸ್ನೇಹದ ವಿಚಾರ ದಲ್ಲಿ ನಡೆದ ಒಂದು ಅತ್ಯುತ್ತಮ ಪ್ರಸಂಗವನ್ನು ನೆನೆಸಿಕೊಂಡು ಅದನ್ನು ವಿವರಿ ಸುತ್ತಾನೆ: (ಬಹುಶಃ ಬೇರೆ ಯಾರ ಜೀವನದಲ್ಲೂ ಸ್ನೇಹದ ವಿಚಾರದಲ್ಲಿ ಇದಕ್ಕಿಂತ ಅತ್ಯುತ್ತಮ ಪ್ರಸಂಗ ನಡೆಯುವುದಿಲ್ಲ.) 'ಒಮ್ಮೆ ಭಾನುಮತಿ ನನ್ನ ಜೊತೆ ಪಗಡೆ ಯಾಡಿ ಸೋತಾಗ, ಸೋತ ಕಾಣಿಕೆಯನ್ನು ನೀಡುವುದೆಂದು ನಾನು ಅವಳನ್ನು ಕಾಡಿದಾಗ, ಅವಳ ಮುತ್ತಿನ ಸರ ಕಿತ್ತು, ಚೆಲ್ಲಾಡಿದ ಮುತ್ತುಗಳನ್ನು ನೋಡಿ ನೋಡಿ (ಅವುಗಳನ್ನೆ ಒಂದೇ ಸಮ ಇವರಿಬ್ಬರೂ ನೋಡಿದರೆಂದೂ ಅರ್ಥೈಸಬಹುದು. ಒಮ್ಮೆ ಚೆಲ್ಲಾಡಿದ ಮುತ್ತನ್ನು, ಮತ್ತೊಮ್ಮೆ ತಾವು ಮಿತಿಮೀರಿದವೇನೊ ಎಂಬರ್ಥ ಒಬ್ಬರ ಮುಖವನ್ನೊಬ್ಬರು ನೋಡಿದರೆಂದೂ ಅರ್ಥೈಸಬಹ.ದು) ನಾವಿಬ್ಬರೂ ತಲ್ಲಣಿಸುತ್ತಿರಲು, ಆ ಸಮಯಕ್ಕೆ ಸರಿಯಾಗಿ ಅಲ್ಲಿಗೆ ಬಂದ ದುರ್ಯೋಧನ ಯಾವ ವಿಕಾರಕ್ಕೂ ಒಳಗಾಗದೆ (ಇವರ ಈ ಆತ್ಮೀಯ ಒಡನಾಟದ ಬಗ್ಗೆ ಮೆಚ್ಚಿಗೆ ಸೂಚಿಸುತ್ತ) 'ಇವುಗಳನ್ನು ಆಯ್ದು ಕೂಡಲೇ ತಪ್ಪದೆ ಹೇಳಿ' (ಎಂದಾಗ ಇವರಿಬ್ಬರಿಗೂ ಹೇಗಾಗಿರಬೇಕು!) ಎಂಬ ಅತ್ಯುತ್ತಮ ದೊರೆಯನ್ನು ಬಿಟ್ಟು, (ತಟಸ್ಥನಾಗಿಯೂ ಇರದೆ, ನಿಮ್ಮ ಕಡೆಗೆ ಬಂದರೆ ಯಾರಿಗೂ ಬೇಡದವ ನಾಗುವುದಿಲ್ಲವೆ' ಎಂದು ಕೇಳುತ್ತಾನೆ. ಇದಿಷ್ಟು ಬಿಟ್ಟರೆ ಕರ್ಣ ಮತ್ತೆ ಬೇರೇನೂ ಮಾತನ್ನೇ ಆಡುವುದಿಲ್ಲ. (ದುರ್ಯೋಧನ ಮತ್ತು ಕರ್ಣರ ಸ್ನೇಹ ಎಷ್ಟು ನಿಸ್ಸಂಶಯ, ನಿಷ್ಕಲ್ಮಷ, ನಿರ್ವ್ಯಾಜ, ನಿರ್ಮಲ ಆತ್ಮೀಯ ಸ್ನೇಹ ವಾಗಿತ್ತೆಂಬುದನ್ನು ಈಗ ಓದುಗರೆ ಊಹಿಸಿಕೊಳ್ಳಬಹುದು.) ಕರ್ಣ ತನಗೆ ಹೇಗೂ ಒಪ್ಪದುದನ್ನು ಖಚಿತವಾಗಿ ತಿಳಿದ ಕೃಷ್ಣ ಅವನಿಗೆ ಹಿಂತಿರುಗಲು ಹೇಳಿ ತಾನೂ ಮುಂದಕ್ಕೆ ಪ್ರಯಾಣ ಬೆಳೆಸಿದನು.

ಇತ್ತ ಕರ್ಣ 'ಕುರುಪತಿಗಿಲ್ಲ ದೈವಬಲ, ಯುದ್ಧದಲ್ಲಿ ಯಾವಾಗಲೂ ದ್ರೋಣ ಅಶ್ವತ್ಥಾಮ ಭೀಷ್ಮರು ಮೇಲೆ ಮೇಲೆ ಯುದ್ಧ ಮಾಡುವರು. ಕೌರವನು ನನ್ನನ್ನೇ ನೆಚ್ಚಿ ವಿಶೇಷವಾಗಿ ಘೋಷಿಸಿದನು. ನನ್ನನ್ನು ಎದುರಿಸಿ ನನ್ನೊಡನೆ ಕಾದಾಡುವವರು ನನ್ನ ಸೋದರರು, ತಿಳಿದೂ ಹೇಗೆ ನಿರ್ದಾಕ್ಷಿಣ್ಯವಾಗಿ ಕೊಲ್ಲುವೆನು, ನನ್ನ ಒಡಲನ್ನೆ ನಾನು ಅರ್ಪಿಸುವೆನು ಯುದ್ಧಭೂಮಿಯಲ್ಲಿ ಪಾಂಡವರು ನನ್ನ ಸೋದರರೆಂಬುದನ್ನು ಅರಿತೆನು. ಇನ್ನು ಹೇಗೆ ನನ್ನವರನ್ನು ಕೊಲ್ಲುವೆನು, ಅಕ್ಕರೆ ಯಿಂದ ನನ್ನನ್ನು ಸಾಕಿದ ನನ್ನನ್ನೆ ಪೂರ್ಣ ನಂಬಿರುವ ದುರ್ಯೋಧನನಿಗೆ ಹೇಗೆ ಯುದ್ಧದಲ್ಲಿ ತಪ್ಪುವೆನು, ಸಿದ್ಧರಾದ ಉದ್ಧತ ವೈರಿರಾಜರ ಸೈನ್ಯವು ಅಳ್ಳಾಡುವಂತೆ ಲೆಕ್ಕಕ್ಕೆ ಚೆನ್ನಾಗಿ ಹೋರಾಡಿ ಆಳಿದವನಿಗಿಂತ ಮುಂಚೆಯೆ ಪರಾಕ್ರಮವನ್ನು



ಮುಂಚೆಯೇ ಪರಾಕ್ರಮವನ್ನು ಕೈಕೊಂಡು ನಿಲ್ಲಿಸುವೆನು" ಎಂದು ತನ್ನಲ್ಲಿಯೆ ಮುಂದಿನ ಕಾರ್ಯವನ್ನು ನಿರ್ಧರಿಸಿಕೊಂಡನು.

ಕೃಷ್ಣನ ಸಲಹೆಯಂತೆ ಕುಂತಿ ಒಂದು ಭಾನುವಾರದ ದಿನ ಕರ್ಣನಲ್ಲಿಗೆ ಬರು-ತ್ತಾಳೆ. ಇದನ್ನು ತಿಳಿದ ಸೂರ್ಯ ಕರ್ಣನ ಹತ್ತಿರಕ್ಕೆ ಬಂದು 'ಕುಂತಿ ಎಷ್ಟು ಲಲ್ಲೈಸಿದರೂ ಪುರಿಗಣೆಯನ್ನು ಕೊಡ ಬೇಡ' ಎಂದು ಹೇಳಿಕೊಡುತ್ತಾನೆ. ಇದ ರಿಂದ ಕರ್ಣನಿಗೆ, ಕುಂತಿ ತನ್ನ ಬಳಿಗೆ ಏಕೆ ಬಂದಿದ್ದಾಳೆಂಬುದು ತಿಳಿಯುತ್ತದೆ. ಕರ್ಣ ಕುಂತಿಗೆ ಕೈಮುಗಿದು 'ತಾಯಿ' ನನಗೆ ಪುಣ್ಯಬಂದಂತೆ ಈಗೇನು ಬಂದಿರಿ, ನಿಮ್ಮ ಕರುಣಾ ಬಲದಿಂದ, ನೀವು ನನ್ನನ್ನು ಇಂದು ಮಗನೆಂದುದರಿಂದ ಛಲವೂ ತ್ಯಾಗವೂ ಪರಾಕ್ರಮವೂ ಶೂರತನವೂ ಈಗ ನನ್ನ ದೇಹದಲ್ಲಿ ನೆಲಸಿದುವು. ಮಕ್ಕಳ ದೇಹದ ಮತ್ತು ಪ್ರಾಣದ ಒಡೆತನವನ್ನು ತಾಯಿಯೂ ತಂದೆಯೂ ಪಡೆದಿದ್ದಾರೆ. ಅವು ಅವರವು, ನೀವು ಸ್ವಲ್ಪ ದಿವಸಕ್ಕೆಂದು ಕೊಟ್ಟದ್ದನ್ನು ಹಿಂತಿರುಗಿಸುವುದು ಅಸಾಧ್ಯವೆ ನೀವು ನನಗೆ ಮರೆಮಾಚದೆ, ಹೇಳಬೇಕಾಗಿರುವ ಸೇವಾಕಾರ್ಯವನ್ನು ಹೇಳಿ' ಎಂದನು. ಅವಳು ಕೇಳಲು ಬಂದಿರುವುದನ್ನು ನಿಸ್ಸಂಕೋಚವಾಗಿ ಕೇಳಲಿ ಎಂದು ಕರ್ಣ ಪ್ರೀತಿಯಿಂದ ಹೀಗೆಲ್ಲ ಮಾತನಾಡಿದ್ದಾನೆ. ಈಗಾಗಲೆ ಧರ್ಮಸಂಕಟ -ಕ್ಕೆ ಸಿಕ್ಕಿರುವ ಕರ್ಣ ಕುಂತಿಯ ಧರ್ಮಸಂಕಟವನ್ನು ಚೆನ್ನಾಗಿ ಅರ್ಥಮಾಡಿ ಕೊಂಡಿದ್ದಾನೆ.

ಕುಂತಿ 'ನಂಬಲರ್ಹವಾದ ನಿನ್ನ ತಮ್ಮಂದಿರು ನಿನ್ನ ಮಾತನ್ನು ನಡೆಸುತ್ತಾರೆ-ನೀನೆ ನೆಲವನ್ನು ಆಳುವುದು ಕಂಡ, ನಿನಗೆ ರಾಜನಾಗಿರುವ ದುರ್ಯೋಧನನ-ಪ್ರೀತಿಯನ್ನೇ ನಿನ್ನ ತಮ್ಮಂದಿರು ಮುಂದಿಟ್ಟುಕೊಂಡು ನಿನ್ನ ಮಾತನ್ನು ನಡೆಸಿ-ಕೊಟ್ಟರೆ ಎಂಡು ದೆಸೆಗೂ ಸ್ವಲ್ಪವೂ ಬೇಸರವಾಗದು, ಮಗನೆ ನೀನು ಒಪ್ಪಬೇಕು-ಎನ್ನುತ್ತಾಳೆ, ಕುಂತಿಗೆ ಕರ್ಣನೂ ಬದುಕಬೇಕು, ಅವರೈವರೂ ಬದುಕಬೇಕೆಂಬ ಆಸೆ ಆದರೆ ಇಂತಹವಳೂ ಅವರೈವರಿಗೆ ಏಕೊ ಏನೊ ಕರ್ಣನ ಜನ್ಮವೃತ್ತಾಂವನ್ನು ಮಾತ್ರ ಈಗಲೇ ಹೇಳುವುದಿಲ್ಲ.

ಕರ್ಣ ಮುಗಳ್ನಗೆ ನಕ್ಕು 'ಭಯ ಲೋಭ-ಇವೆರಡು ಪಾಪಕ್ಕೆ ಭಾಗಿಯಾಗಿರಲು, ಹಿಂದಿನ ಕ್ರಮವನ್ನು ಬಿಟ್ಟು, ಆಳಿದವನ ಸತ್ಕಾರ್ಯವನ್ನು ಹಿಂದಿಕ್ಕಿ, ಅನ್ನದ ಋಣಕ್ಕೆ ತಪ್ಪಿ ಇನ್ನೂ ಬಾಳುವುದೆ, ಪ್ರತಿಜ್ಞೆ ಮಾಡಿಯೂ ಹಾಗೆ ನಿಲ್ಲದೆ ಬಾಳುವಷ್ಟು ಈ ದೇಹ ವಿಖ್ಯಾತ ಕೀರ್ತಿಯಂತೆ ಈ ಯುಗಾಂತರದವರೆಗೂ ಉಳಿಯುತ್ತದೆಯೆ, ಬೆಸ್ತರವನಾಗಿಯೂ ಸ್ವಲ್ಪವೂ ನಾನು ಗುಣವನ್ನು ಬಿಡಲಿಲ್ಲ, ನಿನಗೆ ಮಗನಾದ ನನಗೆ ಬಿಡಲು ಸಾಧ್ಯವಾಗುತ್ತದೆಯೆ, ನೀವುಗಳು ನನ್ನ ಮೇಲಿನ ಹಂಬಲವನ್ನೆ ಬಿಟ್ಟುಬಿಡಿ' ಎನ್ನುತಾನೆ. ಈಗ ಕುಂತಿಗೆ ದುಃಖವನ್ನು ತಡೆಯಲಾಗುವುದಿಲ್ಲ. ನನ್ನ

ಮಕ್ಕಳ ಮೇಲಿನ ಆಸೆಯನ್ನೆ ನಾನು ಬಿಟ್ಟೆನೆಂದು ವಿಪರೀತವಾಗಿ ರೋಧಿಸುತ್ತಾಳೆ. ಆಗ ಕರ್ಣ ತಾನಾಗಿಯೆ 'ಅರ್ಜನನು ಪ್ರತಿಭಟಿಸಿದರೂ ದಿವ್ಯಾಸ್ತ್ರವನ್ನು ಹಿಡಿಯುವುದಿಲ್ಲ, ಉಳಿದ ನಿನ್ನ ಮಕ್ಕಳು ಗಾಯಪಡಿಸಿದರೂ ಅವರನ್ನು ಕೊಲ್ಲುವದಿಲ್ಲ, ಹಿರಿಯ ಯಶಸ್ಸನ್ನೆ ಒಡಿದು ನನ್ನನ್ನೆ ಯುದ್ಧದಲ್ಲಿ ನಾಶಪಡಿಸಿ ಕೊಳ್ಳುತ್ತೇನೆ, ಇನ್ನು ನೀವು ಇಲ್ಲಿರಡೆ ಹೊರಡಿ, , ಎಂದು ಅವಳನ್ನು ಕಳುಹಿಸಿಕೊಡುತ್ತಾನೆ, ಈ ಸಂದರ್ಭದ ಕರ್ಣನಮ್ಮಭಾರತೀಯ ಸಂಸ್ಕೃತಿಯ ಪ್ರತೀಕವಾಗಿದ್ದಾನೆ,

ನಮಗೆ ಅಪಕಾರ ಮಾಡಿವರು ನಮ್ಮ ಸಹಾಯಕ್ಕಾಗಿ ನಮ್ಮ ಬಳಿಗೆ ಬಂದಾಗ, ಹಿಂದಿನದನ್ನು ಎತ್ತಿ ಆಡಡೆ, ಅದನ್ನು ಕ್ಷಮಿಸಿ, ಅವರು ಕೇಳಬೇಕಾಗಿರುವುದನ್ನು ನಿಸ್ಸಂಕೋಚವಾಗಿ ಕೇಳಲಿ ಎಂದು ಪ್ರೀತಿಯಿಂದ ಮಾತನಾಡಿಸಬೇಕು. ಅವರ ತೊಂದರೆಯೇನೆಂಬುದು ಮೂರನೆಯವರಿಂದ ಅದಕ್ಕೆ ಮೊದಲೇ ತಿಳದಿದ್ದರ' ಅವರು ಬಾಯಿ ಬಿಟ್ಟು ಕೇಳುವುದಕ್ಕೆ ಮೊದಲೆ, "ನೀವು ಇಂತಹ ತೊಂದರೆಯಲ್ಲಿದ್ದಿರೆಂದು ತಿಳಿದು ನನ್ನಿಂದಾಗುವ ಸಹಾಯವನ್ನು ಮಾಡುತ್ತೇನೆಂದು ನಾವಾಗಿಯೇ ಹೇಳಬೇಕು. ಆ ಸಹಾಯವನ್ನು ಸಾಧ್ಯವಾದಷ್ಟೂ ಮಾಡಬೇಕು. ಇದು ನಮ್ಮ ಭಾರತೀಯ ಸಂಸ್ಕೃತಿ ಇಲ್ಲಿ ಕರ್ಣ ಹಾಗೆಯೆನಡೆದುಕೊಂಡಿದ್ದಾನೆ ಕುಂತಿ ಕೇಳಬೇಕಾದುದನ್ನು ನಿಸ್ಸಂಕೋಚವಾಗಿ ಕೇಳಲಿ ಎಂದು, ಈ ದೇಹ ತಾಯಿತಂದೆಗಳಂದು ಹೇಳುತ್ತಾನೆ ಹಾಗೂ ಅವಳು ಕೇಳದಿರಲು ಇವನಾಗಿಯೆ ಅದನ್ನು ನಡೆಸಿಕೊಡುತ್ತೇನೆಂದೆ ಹೇಳುತ್ತಾನೆ. ಇದರ ಬದಲು ಮೊದಲಿಗೆ ಪ್ರೀತಿಯಿಂದ ಮಾತನಾಡಿಸಿ, ಅವಳಿಗೆ ಮಾತನಾಡಲು ಅವಕಾಶವನ್ನೆ ಕೊಡದೆ ಇದಕ್ಕಾಗಿ ಬಂದಿರುವೆಯೆಂದು ತಿಳಿಯಿತು, ಅದನ್ನು ನಡೆಸಿಕೊಡುತ್ತೇನೆಂದು ಇವನಾಗಿಯೆ ಹೇಳಿಬಿಟ್ಟಿದ್ದರೆ ಅದು ಇನ್ನೂ ಚೆನ್ನಾಗಿರುತ್ತಿತ್ತೇನೊ ಅನಿಸುತ್ತದೆ.



## ರಾಷ್ಟ್ರಪಿತ ಗಾಂಧೀಜಿ ದರ್ಶನ

ಲೇ-: ಶ್ರೀ ನೋಟಗಿ ಮಲ್ಲಿಕಾರ್ಜುನ "ಕನ್ನಡ ಕವಿ ಕಾಳಿದಾಸ" ಅಥಣಿ
-(ಬೆಳಗಾಂ ಜಿಲ್ಲೆ)

"ಕೊಲವೆನೆಂಬ ಭಾಷೆ ಶಿವನದಾದಡೆ ಗೆಲುವೆನೆಂಬ ಭಾಷೆ ಭಕ್ತನದು"
—ಶ್ರೀಬಸವಣ್ಣನವರು.

ದಿ-2-7-1989 ರ ಅಪರಾಹ್ನನಾಲ್ಕು ಗಂಟೆಯಾಗಿರಬಹುದು. ಒಂದು ದಿವ್ಯ ದೃಷ್ಟಾಂತವಾಯಿತು. ಅದುವೇ ಮಹಾತ್ಮಗಾಂಧೀಜಿಯವರ ದಿವ್ಯಭವ್ಯದರ್ಶನ ಪುಣ್ಯಲಾಭ. ಈ ದೃಷ್ಟಾಂತಕ್ಕೆ ಮುನ್ನ ಒಂದಿಲ್ಲೊಂದು ಸಮಸ್ಯೆಗಾಗಿ ಅತ್ಯಂತ ಮನಸ್ತಾಪವಾಗಿ ಮೂರು ದಿನಗಳಿಂದಲೂ ದುಃಖತಪ್ತ ಹೃದಯದಿಂದ ಕೂಡಿದ ವನಾಗಿ ಅದೇ ವಿಶ್ರಾಂತಿ ಪಡೆಯುತ್ತ ಮಲಗಿದ್ದೆ. ಅದಕ್ಕೂ ಮುಂಚೆ ನನ್ನೀ ತಳಮಳ ಹೃದಯ ಪರಶಿವನಲ್ಲಿ: "ದೇವಾ! ಇನ್ನು ನಿನ್ನಭಕ್ತಕವಿಹೃದಯ ಪರೀಕ್ಷೆ ಮುಗಿಯಲ್ಲಿಲ್ಲವೇ? ಈತ ತಾಳಿಕೊಂಡಷ್ಟೂ ನೀನು ದುಃಖವನ್ನ ಕೊಡುತ್ತೀಯಾ? ಇನ್ನೂ ಹೆಚ್ಚು ಹೆಚ್ಚು ಕಷ್ಟಪರಂಪರೆಯನ್ನೇ ತಂದೊಡ್ಡುತ್ತಿಯಾ? ಇದು ನಿನಗೆ ನ್ಯಾಯವೇ? ಈ ಜಗತ್ತಿನಲ್ಲಿ ಸತ್ಯಕ್ಕೆ ಸ್ಥಾನವೇ ಇಲ್ಲವೇ? ಇದೆಂಥ ರಹಸ್ಯಮಯ ಸೃಷ್ಟಿಯ ಲೀಲೆ!" ಇತ್ಯಾದಿಯಾಗಿ ಪ್ರಾರ್ಥನೆಯೊಂದಿಗೆ ಪ್ರಶ್ನಿಸುತ್ತಲಿತ್ತು! ಆಗ ಆದರೂ ನಾನು ನನ್ನ ಮನಸ್ಸಿಗೆ ಬೋಧೆಗೆಯ್ಯುತ್ತ - ವಿಶ್ವವಿಭೂತಿ ಶ್ರೀ ಬಸವಣ್ಣನವರು; "ದೇವಾ! ಏಕೆ ಹುಟ್ಟಿಸಿದೆ ಎನಗಾಗಿ ತರಾವುದಿಗಳು ಇರಲಿಲ್ಲವೇ?' ಎಂದು ಕೇಳುತ್ತ ದು:ಖಾರ್ತಹೃದಯರಾಗಿ ಕಳವಳಗೊಂಡಿರುವಾಗ, ಇನ್ನು ನಿನ್ನೆಷ್ಟರವ? ಅಂತಹ ಮಹಾತ್ಮರ ಮುಂದೆ ನಿನ್ನ ಚಿಂತೆ ಕಷ್ಟ ದು:ಖ ಎಷ್ಟರ ಮಟ್ಟಿನದು? ತಿಳಿಹೇಳುತ್ತ ಮನೋ ಹೃದಯಕ್ಕೆ ಶಾಂತಿ ಸಂದೇಶ ನೀಡುತ್ತಲಿದ್ದೆ. ಸಾಂತ್ವನಗೊಳಿಸುತಿದ್ದೆ.

"ಮಹಾತ್ಮರಂ ನೆನೆವುದೇ ಘನಮುಕ್ತಿ ಪದಂ" ಎಂಬೀ ಶಿವಾನುಭಾವಿಮೊಗ್ಗೆಯ ಮಾಯಿದೇವರ ವಚನೋಕ್ತಿಯಂತು 'ಕನ್ನಡ ಕವಿ ಕಾಳಿದಾಸ" ಪ್ರತಿ ದಿನವೂ ಸ್ಮರಿಸುವಂತೆ ಅಂದೂ ಕೂಡ ಮಹಾತ್ಮರನ್ನೇನೆನೆಯುತ್ತ ಮಲಗಿಕೊಂಡಾಗ ಈ ದಿವ್ಯ ಸುಖ ಸ್ವಪ್ನ ಸುಧಾವೃಷ್ಟಿಗೆರೆಯಿತು!

ಆ ಶಿವಸುಖಸ್ವಪ್ನದ ವಿವರವಿಂತು: ಪೂರ್ವಾಭಿಮುಖವಾಗಿರ್ದ ನಮ್ಮ ಮನೆಯಲ್ಲಿರುವ ಒಂದು ಚಿಕ್ಕ ಕೋಣೆಯಲ್ಲಿ ಮಹಾತ್ಮ ಗಾಂಧೀಜಿ ಮೂರ್ತಗೊಂಡಿದ್ದಾರೆ

ಅವರ ಸೇವೆಗಾಗಿ ಬಳಿಯಲ್ಲಿ ಹಸಿರು ಅಂಚುಳ್ಳ ಶುಭ್ರ ವಸ್ತ್ರಧಾರಿಣಿಯಾದ ನಡು ವಯಸ್ಸಿನ ಒಬ್ಬ ಹೆಣ್ಣು ಮಗಳು ಕುಳಿತ್ತಿದ್ದಳು. ಇದೇ ಸಮಯಕ್ಕೆ ಪೂಜ್ಯರ ದರ್ಶನಾಕಾಂಕ್ಷಿಯಾಗಿ ಕವಿಯು ಒಳಗೆ ಪ್ರವೇಶಿಸಿ ಅವರ ಹತ್ತಿರ ಅತ್ಯಂತ ಭಯ ಭಕ್ತಿಯಿಂದ ಕುಳಿತು ಅವರ ಪಾದಕಮಲಗಳಲ್ಲಿ ಭಕ್ತಿ ಪ್ರಣಾಮಗಳನು ಸಲ್ಲಿಸುತ್ತಾ ಅವರೂಡನೆ ಮಾತನಾಡತೊಡಗಿದ. ಆ ಸಂಭಾಷಣೆ ಈ ಕೆಳಗಿನಂತೆ:" ನನ್ನ ಸಾವಿರ ಜನ್ಮಗಳ ಪುಣ್ಯದ ಫಲವಾಗಿ ನೀವಿಂದು ಬಂದು ನನಗೆ ದಿವ್ಯ ದರ್ಶನ ಲಾಭ ವನ್ನಿತ್ತಿರಿ ಈಗ ಮೂರುದಿನಗಳಿಂದ ಚಡಪಡಿಸುತ್ತಲಿದ್ದ ದು:ಖತಪ್ತಹೃದಯಕ್ಕೆ ಅಮೃತ ಸೇಚನೆ ಮಾಡಿದಿರಿ. ನನ್ನ ಜನ್ಮ ಸಾರ್ಥಕವಾಯಿತು. ಎಂದೆ! ಆದಕ್ಕೆ ಉತ್ತರವಾಗಿ ಮಹಾತ್ಮರು ಮುಗುಳ್ನಯೊಂದಿಗೆ ಮೌನಸಮ್ಮತಿಯನ್ನಿತ್ತರು. ಇನ್ನೂ ನಾನು ಮುಂದುವರಿಯುತ್ತ ಅವರೂಡನೆ ಇಂತೆಂದೆ: ಮೂರುನೂರು ವರ್ಷಗಳ ಬ್ರಿಟಿಷರ ದುರಾಡಳಿತವನ್ನು ಹೊರಗೊಳಿಸಿ ಭಾರತಾಂಭೆಯ ಪಂವಾಸ್ಯ ಶೃಂಖಲೆಗಳನ್ನು ಹರಿದೂಗೆದು ಭಾರತವನ್ನು ಸ್ವತಂತ್ರವನ್ನಾಗಿಸಿದ ಅಹಿಂಸೆಯ ಅಸಾಂಕ್ರಾಂತಧೀಮಂತ ಮಹಾತ್ಮರು ನೀವು! ಎನ್ನುತ್ತ ಅವರ ಎರಡು ಅಮೃತ ಹಸ್ತಗಳನ್ನು ನನ್ನ ತಲೆಮೇಲೆಇರಿಸಿಕೊಂಡೆ. ಆಗ ಅವರು ಹಸನ್ಮುಖಿಗಳಾಗಿದ್ದರು ಮತ್ತೆ ನಾನು ಇಂತೆಂದೆ : ಸುಮಾರು ಕ್ರಿ. ಶ. 1946ರಲ್ಲಿ ತಮ್ಮ ಜೀವಿತಕಾಲದಲ್ಲಿ ತಾವು ಅಥಣಿಗೆ ಆಗಮಿಸಿದಾಗ ನಾನು 28 ರ ಪ್ರಾಯದವನಾಗಿದ್ದು ತಮ್ಮ ಪ್ರತ್ಯಕ್ಷ ದರ್ಶನ ಲಾಭನನ್ನು ಪಡೆದುದಾಗಿತ್ತು. ಇದೀಗ ನಾಲ್ವತ್ತೆರಡು ವರ್ಷಗಳ ನಂತರ ಸ್ವಪ್ನದಲ್ಲಿ ಬಂದು ದರ್ಶನವನ್ನಿತ್ತಿರಿ ನನ್ನ ಎಪ್ಪತ್ತರ ವೃದ್ಧಾಪ್ಯ ಕಾಲದಲ್ಲಿ !

ನಲವತ್ತೆರಡು ವರ್ಷಗಳ ಹಿಂದಿನ ಸದೇಹ ಸ್ವರೂಪಕ್ಕೂ ಸ್ವಪ್ನಲೋಕದ ಇಂದಿನ ವಿದೇಹ ರೂಪಕ್ಕೂ ತುಲನೆ ಮಾಡಿದಾಗ ಈಗ ಸ್ವಲ್ಪ ಮುಪ್ಪು ಆವರಿಸಿತ್ತು-ತಮಗೀಗ ವಯಸ್ಸೆಷ್ಟೆಂದು ಪ್ರಶ್ನಿಸಿದಾಗ ನನಗೆ ಹನ್ನೊಂದು ಕಡಿಮೆ ನೂರು ವರ್ಷ ಎಂದರು ಮತ್ತೆ ಈ ಮೊದಲು ನಾನು ಅವರನ್ನು ಕುರಿತು:-ನಾನು ನಿಮ್ಮೊಡನೆ ಮಾತನಾಡುವ ಭಾಷೆ ಕನ್ನಡ ಅದು ನಿಮಗೆ ತಿಳಿಯುತ್ತದೊ ಇಲ್ಲವೊ ಎಂದು ಅನುಮಾನಗೊಂಡಾಗ-ಅದಕ್ಕೆ ಅವರು ನನಗೆ ತಿಳಿಯುತ್ತದೆಎಂದರು-ಇನ್ನೂ ನಾನು ಮಹಾತ್ಮರಲ್ಲಿ ಮತ್ತೆ ಹೀಗೆ ಬಿನ್ನವಿಸಿಕೊಂಡೆ : ' ಈಗ್ಗೆ ಕೆಲವು ವರ್ಷಗಳ ಪೂರ್ವದಲ್ಲಿ ಮುರಗೋಡದ ಶಿವಯೋಗಿಮಹಾಂತಜ್ಜನವರು ಕವಿಸನ್ಮಾನಕ್ಕೆಂದು-" ಕನ್ನಡಕವಿ ಕಾಳಿದಾಸ" ನನ್ನು ತಮ್ಮ ಶ್ರೀ ಮಠಕ್ಕೆ ಬರಮಾಡಿಕೊಂಡಿದರು. ಪರಮ ಪೂಜ್ಯರು ನೂರೊಂದುರೂಪಾಯಿ ಗೌರವಧನದೊಂದಿಗೆ ಫಲಪುಷ್ಪ-ಹಾರಗಳನ್ನಿತ್ತು ಮಂಗಳಾಶೀರ್ವದಮಾಡಿ ನನ್ನನ್ನು ಧನ್ಯನನ್ನಾಗಿಸಿದರು. ಆ ಪುಣ್ಯ ಕಾಲದಲ್ಲಿ ಕೆಲವು ನನ್ನ ಹೃದಯುಹಂಬಲದ ಪ್ರಶ್ನೆಗಳನ್ನು ಪಾಟಿಯು ಮೇಲೆ



ಬರೆದು ಶ್ರೀಗಳವರಿಗೆ ತೋರಿಸಿ ಉತ್ತರವನ್ನು ಪಡೆದು ಸಾಂತ್ವನ ಹೊಂದುತ್ತಲಿದ್ದೆ. ಆ ವಿವಿಧ ಆಧ್ಯಾತ್ಮಿಕ ಪ್ರಶ್ನೆಗಳ ವಿವರ ಈಗ ತಮ್ಮ ಮುಂದೆ ನಾನು ಮಾಡುತ್ತಿಲ್ಲ. ಆದರೆ ಅದೇ ಸಮಯಕ್ಕೆ ಒಂದು ಸಂದರ್ಭದಲ್ಲಿ ಮಹಾಂತಜ್ಜ ಶಿವಯೋಗಿಗಳು (ಮಹಾತ್ಮಗಾಂಧೀಜಿಯವರನ್ನು ಕುರಿತು) ತಮ್ಮ ಬಗೆಗೆ-' ಗಾಂಧೀಜಿ ಯೂರ್ರೆಪಾ ಅವರು ದೇವರು ! ಎಂದು ಉದ್ಗಾರವಾಣಿಯಿಂದ ಅಪ್ಪಣೆಕೊಡಿಸಿರುವುದನ್ನು ನಾನು ಈ ಕಿವಿಯಾರೆ ಕೇಳಿರುವೆ.

ಆದ್ದರಿಂದ ತಮ್ಮಂಥಹ ಮಹಾತ್ಮರು ಸಹಸ್ರ ವರ್ಷಕ್ಕೊಮ್ಮೆ ಈ ಭೂಮಿಗೆ ಅವತರಿಸಿ ಬರುವುದುಂಟು. ತಾವು ವಿಶ್ವವಿಭೂತಿಗಳ ಶ್ರೇಣಿಯಲ್ಲಿದ್ದವರು. ತಮ್ಮ ಧವಲ ಕೀರ್ತಿ ವಿಶ್ವವನ್ನೇ ವ್ಯಾಪಿಸಿದೆ. ತಮ್ಮೀ ಕೀರ್ತಿಕಲಶ ಸೂರ್ಯಚಂದರ ಕಾಲ ಮುಗಿದು ಹೋದರೂ ಶಾಶ್ವತವಾಗುಳಿದು ಪರಶಿವ ತತ್ತ್ವದೊಡನೆ ಬೆರೆದು ಬೆಳಗುತ್ತಲಿರುವುದು ನಿಚ್ಚಿತ. ತಮ್ಮ ಮಂಗಲಾಶೀರ್ವಾದವು ಸಹಸ್ರ ಕಾಲವೂ ನನ್ನ ಮೇಲಿರಲಿ ಎಂದಾಗ ಮೌನ ಸಮ್ಮತಿಯೊಂದಿಗೆ ಮಂದಸ್ಮಿತ ವದನರಾಗಿದ್ದರು ಗಾಂಧೀಜಿ!

ಆನಿತರಲ್ಲಿ ತಮ್ಮ ಮೊಮ್ಮಗಳಾದ ತೇಜಸ್ವಿನಿ ಓಡುತ್ತ ಬಂದು ನನ್ನ ತೊಡೆಯ ಮೇಲೆ ಕುಳಿತಳು. ಆ ಮುದ್ದು ಮಗುವಿನ ಶಿರಸ್ಸಿನ ಮೇಲೆ ಮಹಾತ್ಮಜಿಯವರ ಎರಡೂ ಅಮೃತ ಹಸ್ತಗಳನ್ನಿರಿಸಿ ಅವರಿಂದ ಶುಭಾಶೀರ್ವಾದ ಫಲವನ್ನು ಪಡೆದೆ. ಈಗ ಮೂರುದಿನಗಳಿಂದ ದುಃಖಾಶ್ರುಗಳನ್ನು ಸುರಿಸುತ್ತಲಿದ್ದ ಕಣ್ಣುಗಳು ಇದೀಗ ಪರಮಾನಂದ ಬಾಷ್ಪಗಳನ್ನು ಸುರಿಸುತ್ತಲಿದ್ದವು !

ಇದೇ ಬಗೆಯಾಗಿ " ಕನ್ನಡ ಕವಿ ಕಾಳಿದಾಸ " ನಿಗೆ ವಿಶ್ವದ ವಿವಿಧ ಮಹಿಮಾ ಪುರುಷರಾದ ಮಹಾತ್ಮರು ಒಂದಿಲ್ಲೊಂದು ರೀತಿಯಿಂದ ಆಗಮಿಸಿಶಿವತತ್ತ್ವ ರಹಸ್ಯ ಸತ್ವಭರಿತ ಪರಮ ಸತ್ಯಪೂರಿತ ಎಂಬುದನ್ನು ನಿಶ್ಚಿತ ಗೊಳಿಸಿ ಅಂತೆಯೇ ಪ್ರತ್ಯಕ್ಷ ಪ್ರಮಾಣ ಪೂರ್ವಕವಾಗಿ ' ಸತ್ಯಂ ಶಿವಂ ಸುಂದರಂ , ಎಂಬ ಶಿವೋಕ್ತಿಯನ್ನು ಸತ್ಯ ಗೊಳಿಸಿದ್ದಾರೆ. ಅದಕಾಗಿಯೇ ' ಸತ್ಯ ಮೇವ ಜಯತೆ ' ಎಂಬೀ ಅಮೃತವಾಣಿ ನಿಜಕ್ಕೂ ಸತ್ಯವೆಂಬುವುದು ! ಇಲ್ಲಿ ಇದನ್ನೆಲ್ಲ ಯಾಕೆ ವಿವರಿಸಿದೆನೆಂದರೆ " ಉಳಿದು ಕೂಡುವ ಯೋಗ" ದಲ್ಲಿದ್ದ ಮಹಾತ್ಮರ ಚಿಜ್ಯೋತಿ ಪ್ರಕಾಶದ ಚಿತ್ ಶಕ್ತಿ ಸೂಕ್ಷ್ಮ ಲೋಕದಲ್ಲಿ ದುಃಖಿತ ಶರಳ ಹೃದಯಗಳನ್ನು ಯಾವ ರೀತಿಯಲ್ಲಿ ಸಾಂತ್ವನ ಗೊಳಿಸುತ್ತಲಿದೆ ಎಂಬುದನ್ನು ತೋರಿಸುವುದಕ್ಕಲ್ಲದೆ ಕೇವಲ ಆತ್ಮ ಪೌರುಷಕ್ಕಾಗಿ ಅಲ್ಲ.

# ಪ್ರೌಢ ಷಟ್ಪದಿ ಸ್ತೋತ್ರಪಂಚಕಂ

ಶ್ರೀ ಪಿ. ಬಸವಣ್ಣ ಶ್ರೀ ಶಂಭುಲಿಂಗ ಕ್ಷೇತ್ರ, ಚಿಲಕವಾಡಿ
ಕೊಳ್ಳೆಗಾಲ ತಾಲ್ಲೂಕು.

ಶ್ರೀಗುರುಸಾರ್ವಭೌಮನೆ ಕರುಣಾಕರನೆ
ರಾಗದ್ವೇಷಾದಿರಹಿತಗುಣಾನ್ವಿತನೆ
ಯೋಗಿಕುಲತಿಲಕನೆ ಪರಮಪರಂಜ್ಯೋತಿರೂಪನೆ ನಿರಸೂಯನೆ ।
ತ್ಯಾಗಿವರನೆ ಭಕ್ತಜನಕಲ್ಪದ್ರುಮನೆ
ರಾಗದಿ ನಿನ್ನಡಿಗತುಳಭಯಭಕ್ತಿಯಿಂ
ಬಾಗಿ ಮಣಿ ಯುವೆ ಮೇದಿನಿಯ ಶಿವನೆ ಶಿವಕುಮಾರೇಶಗುರುವರನೆ ||೧||

ಪಾಪವಿದೂರಂ ಸುಗುಣಸುರಸುಂದರಂ
ಕೋಪದಿಗುಣಗಣಹರಣಂ ಮೂದೆರದ
ತಾಪನಿವಾರಣಂ ಪಂಚಕ್ಲೇಶರಹಿತಂ ಸಜ್ಜನವಂದಿತಂ ।
ಶಾಪಾನುಗ್ರಹಸಮರ್ಥಂ ದೀನಪಾಲಂ ಕೋಮಲಂ
ಕಾಪಾಡೆಮ್ಮ ಬಿಡದನಿಶಂ ಶ್ರೀ ಸಿದ್ಧಗಂಗಾಮಠದಧೀಶಂ ||೨||

ಸಿದ್ಧರೊಡೆಯನೆ ವಿದ್ಯಾಸಂಪದವ ಸಂ
ವೃದ್ಧಿಗೊಳಿಪನೆ ಬದ್ಧರನುದ್ಧರಿಸುತಿಹ
ಶ್ರದ್ಧಾನ್ವಿತನೆ ಕಾಯಕಬದ್ಧನೆ ಯೋಗನಿದ್ರಾಮುದ್ರಾಂಕನೆ ।
ಶುದ್ಧಾಚಾರಶೀಲಂಗಳ ಪಾಲಿಪನೆ
ಬುದ್ಧಿವಿಹೀನ ದುಷ್ಕರ್ಮಿಯನುಂ ಪೊರೆವ
ಮುಗ್ಧನೆ ಬಿದ್ದು ಬೇಡುವೆ ಶ್ರೀಶಿವಕೂಮಾರೇಶನೆ ಭವನಾಶನೆ ||೩||

ವಿಮಲಚರಿತನೆ ವಿಶ್ವವಿನುತವೈರಾಗ್ಯ
ಶಮದಮಷಟ್ಕಸಂಪನ್ನನೆ ಚಿದ್ಘನನೆ
ಸಮರಹಿತಜ್ಞಾನಸೂರ್ಯನೆ ಭಕ್ತರಾನಂದಶರಧಿಚಂದ್ರನೆ ।
ಸುಮಬಾಣನ ಗೆಲಿದ ಶೂರನೆ ಸನ್ನುತಾ
ಗಮತತ್ತ್ವನಿಪುಣನೆ ನಿನ್ನಯ ಪದಯುಗಕೆ
ನಮಿಪೆ ಮಹಾಮಹಿಮಸಾಂದ್ರನೆ ಶ್ರೀ ಸಿದ್ಧಗಂಗಾಮಠದೊಡೆಯನೆ. ||೪||



ಮುಗ್ಧಸಹಸ್ರಾರು ವಿದ್ಯಾರ್ಥಿನಿಕರಕೆ
ದುಗ್ಧಾನ್ನವಸತಿಯನೊದಗಿಸಿ ಪೈದಡವಿ
ಮುದ್ದಿಸಿ ಪೊರೆವ ಪುಣ್ಯಪುರುಷ ತ್ರಿವಿಧದಾಸೋಹಿಗುರುವರೇಣ್ಯನಂ ।
ಸದ್ಗುರು ನೀನೋರ್ವನೇ ದಿಕ್ಕೆಂದರಿದು
ಗದ್ಗದನಾಗಿಂತು ಪಾಡುತ ವಂದಿಪೆಂ
ಮುದ್ದುಗುರು ಸಿದ್ಧಗಂಗಾಮಠಪತಿಯಂ ಶಿವಕೂಮಾರಸ್ವಾಮಿಯಂ ||೫||

ವಿ. ಸೂ:- ಶ್ರೀ ಪಟ್ಟೇದ ಚನ್ನಪ್ಪನವರ ಬಸಪ್ಪನವರು ಈ ಪ್ರೌಢ ಷಟ್ಪದಿ ಛಂದಸ್ಸಿನ ಮೂಲಪುರುಷರು. ಇದು 4, 5, 4, 5, ಮಾತ್ರೆಗಳ ಗಣಗಳಿಂದ ಕೂಡಿದ ಷಟ್ಪದಿ. ಭಾಮಿನಿಷಟ್ಪದಿ ಹೇಗೆ 3, 4, 3, 4, ರಿಂದ ಕೂಡಿದೆಯೋ ಹಾಗೆ ಇದು 4, 5' 4, 5, ರಿಂದ ಕೂಡಿದೆ. ಅಂದರೆ 1, 2 ಹಾಗೂ 4, 5. ನೆಯ ಸಾಲುಗಳಲ್ಲಿ 4, 5, 4, 5, ಮಾತ್ರೆಯ ಗಣಗಳಿದ್ದು ; ಷಟ್ಪದಿ ಛಂದಸ್ಸಿನ ನಿಯಮದಂತೆ 3 ಹಾಗೂ 6 ನೆಯ ಸಾಲುಗಳಲ್ಲಿ ಅವುಗಳ 1½ ಯಷ್ಟು ಅಂದರೆ 4, 5, 4, 5, 4, 5, ಹಾಗೂ ಒಂದು ಗುರುವೂ ಇದೆ. ಷಟ್ಪದಿಲಕ್ಷಣಕ್ಕೆ ಯಾವ ಕುಂದೂ ಬಂದಿಲ್ಲ.

## ಬಸವ ಪುರುಷ

ಬಸವನ ನಾಮವು ಕಾಮಧೇನು ಕಾಣಿರೋ
ಬಸವನ ನಾಮವು ಕಲ್ಪವೃಕ್ಷ ಕಾಣಿರೋ
ಬಸವನ ನಾಮವು ಚಿಂತಾಮಣಿ ಕಾಣಿರೋ
ಬಸವನ ನಾಮವು ಪರುಷದ ಖಣಿ ಕಾಣಿರೋ
ಬಸವನ ನಾಮವು ಸಂಜೀವಿನಿ ಮೂಲಿಕೆ ಕಾಣಿರೋ
ಇಂತಪ್ಪ ಬಸವನ ನಾಮಾಮೃತವು
ಎನ್ನ ಜಿಹ್ವೆ ತುಂಬಿ ಹೊರಸೂಸಿ ಮನ ತುಂಬಿತು
ಭಾವ ತುಂಬಿ ಹೊರಸೂಸಿ ಸಕಲ ಕರುಣೇಂದ್ರಿಯಂಗಳ ತುಂಬಿತ್ತು.
ಆ ಸಕಲ ಕರಣೇಂದ್ರಿಯಂಗಳು ತುಂಬಿ ಹೊರಸೂಸಿ
ಸರ್ವಾಂಗ ರೋಮ ಕುಳಿಗಳನ್ನೆಲ್ಲ ವೇಧಿಸಿತಾಗಿ,
ನಾನು ಬಸವಾಕ್ಷರವೆಂಬ ಹಡಗನೇರಿ
ಬಸವ ಬಸವ ಬಸವ ಎಂದು
ಭವಸಾಗರವ ದಾಟಿದೆನಯ್ಯಾ ಅಖಂಡೇಶ್ವರಾ ॥

—ಷಣ್ಮುಖ ಸ್ವಾಮಿಗಳು.

# ಕ್ಷೇತ್ರವಾರ್ತೆ

ದಿ. 30.9.89 ರಂದು ಶ್ರೀ ಸಿದ್ಧಲಿಂಗೇಶ್ವರಸ್ವಾಮಿಗೆ ನವರಾತ್ರಿ ಉತ್ಸವ ಕಾರ್ಯಕ್ರಮಗಳು ಪ್ರಾರಂಭವಾದವು ಬೆಟ್ಟದ ಮೇಲಿನ ಉತ್ಸವ ಮೂರ್ತಿಯನ್ನು ವಿಧ್ಯುಕ್ತವಾಗಿ ಅಭಿಷೇಕ ರಾಜೋಪಚಾರದೊಂದಿಗೆ "ಪಟ್ಟಕ್ಕೆ" ಕೂರಿಸಲಾಯಿತು. ಪರಮಪೂಜ್ಯ ಶ್ರೀ ಶ್ರೀಗಳು ನೇತೃತ್ವವಹಿಸಿದ್ದರು. ಉತ್ತರಾಧಿಕಾರಿಗಳಾದ ಪೂಜ್ಯ ಶ್ರೀ ಸಿದ್ಧಲಿಂಗಸ್ವಾಮಿಗಳು ಉಪಸ್ಥಿತರಿದ್ದರು.

ದಿ 2.10.89 ರಂದು ವಿವಿಧ ವಿದ್ಯಾರ್ಥಿ ಸಂಘಗಳ ಆಶ್ರಯದಲ್ಲಿ ಪ್ರಫುಲ್ಲ ಭವನದಲ್ಲಿ ರಾಷ್ಟ್ರಪಿತ ಗಾಂಧೀಜಿಯವರ ಜಯಂತಿಯನ್ನು ಆಚರಿಸಲಾಯಿತು. ತುಮಕೂರಿನ ಪ್ರಸಿದ್ಧ ಕೈಗಾರಿಕೋದ್ಯಮಿಗಳಾದ ಶ್ರೀ ಎನ್.ಆರ್. ಜಗದೀಶ್ ರವರು ಅಧ್ಯಕ್ಷತೆ ವಹಿಸಿದ್ದರು. ಬಿ.ಜೆ.ಪಿ.ಯ ರಾಜ್ಯಮಟ್ಟದ ಕಾರ್ಯದರ್ಶಿಗಳಾದ ಶ್ರೀ ಎಂ ರಾಜಾಚಾರ್ ರವರು ಗಾಂಧೀಜಿಯ ಜೀವನವನ್ನು ಕುರಿತು ಉಪನ್ಯಾಸ ಮಾಡಿದರು.

ದಿ. 3-10-89 ರಿಂದ 7-10-89 ರ ವರೆಗೆ ಶ್ರೀ ಮಠದಲ್ಲಿ ಜಿಲ್ಲಾ ಮಟ್ಟದ ಸ್ಕೌಟ್ ಮತ್ತು ಗೈಡ್ಸ್ ಶಿಬಿರವನ್ನು ನಡೆಸಲಾಯಿತು. ಜಿಲ್ಲೆಯ ವಿವಿಧ ಕಡೆಗಳಿಂದ 80 ಸ್ಕೌಟ್‌ಗಳೂ 28 ಗೈಡ್ಸ್‌ಗಳೂ ಶಿಬಿರಾರ್ಥಿಗಳಾಗಿ ಭಾಗವಹಿಸಿದ್ದರು. ಶಿಬಿರ-ನಿರ್ದೇಶಕರಾಗಿ ಶ್ರೀ ಟಿ ಆರ್. ವೇಣುಗೋಪಾಲ್ ಹಾಗೂ ಶ್ರೀ ಎಸ್. ಶಿವರುದ್ರಪ್ಪ ಮತ್ತು ಶ್ರೀಮತಿ ಜೀವರತ್ನರವರು ಶಿಬಿರಾರ್ಥಿಗಳಿಗೆ ಮಾರ್ಗದರ್ಶನ ಮಾಡಿದರು. ಮಠದ, ಉತ್ತರಾಧಿಕಾರಿಗಳಾದ ಪೂಜ್ಯ ಶ್ರೀ ಸಿದ್ಧಲಿಂಗಸ್ವಾಮಿಗಳು ದಿ. ೬-10-89 ರಂದು ಶಿಬಿರಾರ್ಥಿಗಳು ಸ್ಕೌಟ್ ಸಂಸ್ಥೆಯ ಧ್ಯೇಯೋದ್ದೇಶಗಳನ್ನು ತಿಳಿಸಿದರು. ಶ್ರೀ ಸಿದ್ಧಗಂಗಾ ಶಿಕ್ಷಣ ಸಂಸ್ಥೆಗಳ ನಿರ್ದೇಶಕರಾದ ಶ್ರೀ ಸಿದ್ಧಲಿಂಗಮೂರ್ತಿಯವರು ಶಿಬಿರಾರ್ಥಿಗಳನ್ನು ಕುರಿತು ಉಪನ್ಯಾಸ ಮಾಡಿದರು. ಪರಮ ಪೂಜ್ಯ ಶ್ರೀ ಶ್ರೀ-ಗಳವರು ಶಿಬಿರಾರ್ಥಿಗಳಿಗೆ ಉಚಿತ ಊಟ ವಸತಿಯನ್ನು ವ್ಯವಸ್ಥೆ ಮಾಡಿಕೊಟ್ಟದ್ದನ್ನು ಶಿಬಿರದ ನಿರ್ದೇಶಕರು ತುಂಬು ಹೃದಯದಿಂದ ಕೃತಜ್ಞಪೂರ್ವಕವಾಗಿ ಸ್ಮರಿಸಿದರು.

ನವರಾತ್ರಿ ಹಬ್ಬದ ಆಚರಣೆಯ ಅಂಗವಾಗಿ ದಿ. 7-10-89 ರಂದು ಶ್ರೀ ಮಠದಲ್ಲಿ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳವರ ಸಮುಖದಲ್ಲಿ ಗ್ರಂಥ ಭಂಡಾರದಲ್ಲಿ ವಿಧ್ಯುಕ್ತವಾಗಿ ಸರಸ್ವತೀ ಪೂಜೆಯನ್ನು ನೆರವೇರಿಸಿದ ಸಂದರ್ಭದಲ್ಲಿ ಸನಿವಾಸ ಶಿಕ್ಷಣ ಸಂಸ್ಥೆ

ಗಳ ಮುಖ್ಯಸ್ಥರು ಹಾಗೂ ಅಧ್ಯಾಪಕ ಮತ್ತು ಸಿಬ್ಬಂದಿ ವರ್ಗದವರು ವಿಧ್ಯಾರ್ಥಿಗಳ ಜೊತೆಗೆ ಭಾಗವಹಿಸಿ ಸಮಾರಂಭನ್ನು ಯಶಸ್ವಿಯಾಗಿ ನೆಡೆಯಲು ಸಹಕರಿಸಿದರು.

ದಿ. 9-10-89 ರಂದು ಪರಮ ಪೂಜ್ಯ ಶ್ರೀ ಶ್ರೀ ಗಳವರ ದಿವ್ಯ ನೇತೃತ್ವದಲ್ಲಿ ಶ್ರೀ ಮಠದಲ್ಲಿ ಆಯುಧಪೂಜೆಯನ್ನು ಆಚರಿಸಲಾಯಿತು. ಪ್ರಾಚೀನಾಯುಧಗಳಾದ ಖಡ್ಗ ತ್ರಿಶೂಲ ಮುಂತಾದುವುಗಳ ಜೊತೆಗೆ ಮತ್ತಿತರ ಆಧುನಿಕ ಆಯುಧಗಳನ್ನು ಯೋಗದಂಡ, ಶ್ರೀಮಠದ ಕಲ್ಯಾಣಿಯ ದಂಡೆಯಲ್ಲಿಟ್ಟು ಪೂಜಿಸಿ ಅಕ್ಕಪಕ್ಕದ ಗ್ರಾಮದ ಮುಂಖಡರುಗಳಿಗೆ ಮಾಮೂಲು ಪ್ರಸಾದಕೊಡಲಾಯಿತು. ವಿವಿಧ ವಾಹನಗಳು ಸಾಲಂಕೃತವಾಗಿ ಉತ್ಸವದಲ್ಲಿ ಭಾಗವಹಿಸಿದ್ದು ವಿಶೇಷ ಶೋಭೆಯನ್ನುಂಟುಮಾಡಿತ್ತು.

ದಿ. 10-10-89 ರಂದು ಶ್ರೀ ಮಠದ ಅಧಿ ದೇವತೆಯಾದ ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿಯ ಉತ್ಸವದೊಂದಿಗೆ ವಿಜಯದಶಮಿ ಕಾರ್ಯಕ್ರಮಗಳು ನಡೆದವು ಪ್ರಾರಂಭದಲ್ಲಿ ಶ್ರೀ ಮಠದ ಉತ್ತರಾಧಿ ಕಾರಿಗಳಾದ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳವರನ್ನು ಸಾಲಂಕೃತ ಪಲ್ಲಕ್ಕಿಯಲ್ಲಿ ಕೂರಿಸಿ ಸಂಭ್ರಮ ಸಡಗರಗಳಿಂದ ಬೆಟ್ಟದ ಮೇಲಿರುವ ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿಯ ಸನ್ನಿದಿಗೆ ಕರೆದೊಯ್ಯಲಾಯಿತು. ಸಂಜೆ ನಡೆದ ಧಾರ್ಮಿಕ ಸಮಾರಂಭದಲ್ಲಿ ಪರಮ ಪೂಜ್ಯ ಶ್ರೀ ಶ್ರೀ ಗಳ ದಿವ್ಯ ಅಧ್ಯಕ್ಷತೆಯಲ್ಲಿ ಶ್ರೀ ಮಠದ ಹಳೆಯ ವಿದ್ಯಾರ್ಥಿಗಳೂ ವಿಶೇಷಾಧಿಕಾರಿಗಳೂ ಆದ ವಿದ್ವಾನ್ ಕೆ. ಎಂ. ರೇವಣಸಿದ್ದಯ್ಯನವರು ಮತ್ತು ಶ್ರೀ ಹೆಚ್. ವಿ ವೀರಭದ್ರಯ್ಯನವರು ಉಪನ್ಯಾಸಮಾಡಿದರು. ಪರಮ ಪೂಜ್ಯರು ಆಶೀರ್ವಚನ ನೀಡಿದ ನಂತರ ಶ್ರೀ ಸಿದ್ದಲಿಂಗೇಶ್ವರ ಸ್ವಾಮಿಗೆ ರಾಜೋಪಚಾರಾದಿ ಪೂಜಾ ಕಾರ್ಯಗಳು ಜರುಗಿದನಂತರ ಮಂಗಳದೊಂದಿಗೆ ಸಭೆ ಮುಕ್ತಾಯವಾಯಿತು.

ಅಕ್ಟೋಬರ್ ದಿ. 17, 18, 19, ರಂದು ಶ್ರೀಮಠದಲ್ಲಿ ಆಧ್ಯಾತ್ಮಿಕ ಶಿಬಿರನಡೆದ ಸಂದರ್ಭದಲ್ಲಿ ಶ್ರೀ ಪಿ, ಎನ್. ಚಂದ್ರಶೇಖರಯ್ಯ, ದೊಡ್ಡಸಾರಂಗಿ ಶ್ರೀ ಮೃತ್ಯುಂಜಯಪ್ಪ ಹಾಗೂ ಶ್ರೀ ಹೆಚ್. ವೀರಭದ್ರಯ್ಯನವರು ಧಾರ್ಮಿಕೋಪನ್ಯಾಸ ನೀಡಿದರು ಚಿತ್ರದುರ್ಗ ಜಿಲ್ಲೆ, ಹಿರಿಯೂರು ತಾಲ್ಲೂಕು, ಐಮಂಗಳ ಗ್ರಾಮದ ರಾಮಕೃಷ್ಣಾಶ್ರಮದ ಐವತ್ತು ಮಂದಿ ವಿದ್ಯಾರ್ಥಿಗಳು ಶ್ರೀ ಬುಡೇನ್ ಸಾಹೇಬ್‌ರವರ ನೇತೃತ್ವದಲ್ಲಿ ಶಿಬಿರದಲ್ಲಿ ಭಾಗಿಗಳಾಗಿದ್ದು ತರಬೇತಿ ಪಡೆದರು.

ದಿ. 30-10-89 ರಂದು ಶ್ರೀ ಮಠದಲ್ಲಿ ಕಾರ್ತಿಕೋತ್ಸವದ ಪ್ರಾರಂಭದ ಕಾರ್ಯಕ್ರಮಗಳು ಆರಂಭವಾದುವು. ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿಗೆ ವಿಧ್ಯುಕ್ತ ಪೂಜಾದಿಗಳು ನಡೆದವು. ಕಾರ್ತಿಕದ ದೀಪವನ್ನು ಪ್ರಾರ್ಥನಾ ಸಭೆಯಲ್ಲಿ ಸಂಪ್ರದಾಯದಂತೆ ಶ್ರೀ ಮಠದ ಮುಂದಿನ ಸ್ತಂಭದಮೇಲಕ್ಕೇರಿಸಲಾಯಿತು.



# ಸುದ್ದಿ ಸಾರ

ದಿ. 30-9-89 ರಂದು ಚಿತ್ರದುರ್ಗಜಿಲ್ಲೆ ಹಿರಿಯೂರು ತಾಲ್ಲೂಕು ಆದಿವಾಲ ಗ್ರಾಮದ ಶ್ರೀನೆಹರೂ ಗ್ರಾಮಾಂತರ ಪ್ರೌಢಶಾಲೆಯಲ್ಲಿ ಪರಮ ಪೂಜ್ಯ ಶ್ರೀ ಶ್ರೀ ಗಳವರ 82 ನೆ ಹುಟ್ಟುಹಬ್ಬವನ್ನಾಚರಿಸಲಾಯಿತು. ಶ್ರೀ ಮಠದ ಆಡಳಿತಾಧಿಕಾರಿಗಳಾದ ಶ್ರೀ ಜಿ. ನಂಜಪ್ಪನವರು ಅಧ್ಯಕ್ಷತೆ ವಹಿಸಿದ್ದರು. ಶ್ರೀ ಸಿದ್ಧಲಿಂಗೇಶ್ವರ ಸಂಸ್ಕೃತ ಕಾಲೇಜಿನ ಪ್ರಾಂಶುಪಾಲರಾದ ಶ್ರೀ ಎಸ್. ಪಿ. ಶಿವಶಂಕರ್‌ರವರು ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದು-ಪರಮ ಪೂಜ್ಯರು ಸಮಾಜಕ್ಕೆ, ರಾಷ್ಟ್ರಕ್ಕೆ ಸಲ್ಲಿಸಿರುವ ಸೇವೆಯನ್ನು ಪರಿಚಯ ಮಾಡಿಕೊಟ್ಟರು, ಗ್ರಾಮೀಣ ಮುಖಂಡರು ಹಾಗೂ ಯುವಕ ಸಂಘ ಸಮಾರಂಭದ ಯಶಸ್ವಿಗೆ ಸಕ್ರಿಯವಾಗಿ ಸಹಕರಿಸಿದ್ದನ್ನು ಕಾರ್ಯಕರ್ತರು ಹೃತ್ಪೂರ್ವಕವಾಗಿ ಸ್ಮರಿಸಿದರು.

ಬುದ್ಧ, ಬಸವ, ಬಾಪು ಜಗತ್ತಿನ ಮಹಾಪುರುಷರು, ಮಾನವತಾ ಪ್ರೇಮಕ್ಕೆ ಬದುಕನ್ನೇ ಅರ್ಪಿಸಿಕೊಂಡವರು ಎಂಬುದಾಗಿ ಪರಮ ಪೂಜ್ಯ ಶ್ರೀ ಶ್ರೀ ಗಳವರು ದಿ.1-10-89 ರಂದು ಚಿತ್ರದುರ್ಗದಲ್ಲಿ ನಡೆದ ಪೂಜ್ಯ ಶ್ರೀ ಮನ್ಮಹಾರಾಜ ಮಲ್ಲಿಕಾರ್ಜುನ ಮುರುಘರಾಜೇಂದ್ರಸ್ವಾಮಿಗಳವರ ಪೀಠಾರೋಹಣ ರಜತ ಮಹೋತ್ಸವ ಸಮಾರಂಭದ ಉದ್ಘಾಟನಾ ಸಭೆಯ ಅಧ್ಯಕ್ಷ ಪೀಠದಿಂದ ನುಡಿದರು. ಸುತ್ತೂರು ಮಠದ ಪೂಜ್ಯ ಶ್ರೀ ಶ್ರೀ ದೇಶೀಕೇಂದ್ರಮಹಾಸ್ವಾಮಿಯವರು ಉದ್ಘಾಟಿಸಿದರು. ಚಿತ್ತರಗಿ ಸಂಸ್ಥಾನದ ಪೂಜ್ಯ ಮಹಾಂತ ಸ್ವಾಮಿಗಳು ಮುಖ್ಯ ಅತಿಥಿಗಳಾಗಿದ್ದರು. ರಾಷ್ಟ್ರನಾಯಕ ಶ್ರೀ ಎಸ್. ನಿಜಲಿಂಗಪ್ಪನವರು ಸ್ಮರಣ ಸಂಚಿಕೆಯನ್ನು ಬಿಡುಗಡೆ ಮಾಡಿದರು. ಪೂಜ್ಯ ಶ್ರೀ ಮಲ್ಲಿಕಾರ್ಜುನ ಮುರುಘರಾಜೇಂದ್ರಸ್ವಾಮಿಗಳು ಆಶೀರ್ವಚನ ನೀಡಿದರು.

### "ಪಾನನಿಷೇಧಕ್ಕಾಗಿ-ಧರ್ಮಸಂಗ್ರಾಮ"

ದಿ. 2-10-89 ರಂದು ಬೆಂಗಳೂರಿನಲ್ಲಿ ಗಾಂಧಿ ಜಯಂತಿಯ ಅಂಗವಾಗಿ ಸಮಾವೇಶಗೊಂಡಿದ್ದ "ಮದ್ಯಪಾನ ನಿಷೇಧ ಅಂದೋಲನ ಧರ್ಮಗುರುಗಳ ರಾಜ್ಯಮಟ್ಟದ ಸಮಾಲೋಚನಾಸಭೆಯ ಅಧ್ಯಕ್ಷತೆ ವಹಿಸಿದ್ದ ಪರಮ ಪೂಜ್ಯ ಶ್ರೀ ಶ್ರೀ ಗಳು" ಮದ್ಯಪಾನ ನಿಷೇಧಗೊಳಿಸಬೇಕು. ಎಂದು ಸರ್ಕಾರವನ್ನು ಒತ್ತಾಯಿಸಲು। ಎಲ್ಲಧರ್ಮಗುರುಗಳು ಒಂದುಕಡೆಸಮಾವೇಶಗೊಂಡು ಒಂದು ತೀರ್ಮಾನಕ್ಕೆ ಬರಬೇಕು ಎಂದು ಸೂಚಿಸಿದರು. ಸಮಾರಂಭದಲ್ಲಿ ಸುತ್ತೂರು ಪೂಜ್ಯ ಶ್ರೀ ಶ್ರೀ ಗಳು, ಸಿರಿಗೆರೆಯ ಪೂಜ್ಯ ಶ್ರೀ ಶ್ರೀ ಗಳು ಪೂಜ್ಯ ಚಾರುಕೀರ್ತಿ ಭಟ್ಟಾಕರ ಶ್ರೀ ಶ್ರೀ ಗಳು, ಸಮಾವೇಶಗೊಂಡಿದ್ದರು.

ಆದಿಚುಂಚನಗಿರಿಯ ಪೂಜ್ಯ ಬಾಲಗಂಗಾಧರನಾಥ ಸ್ವಾಮಿಗಳು ಆದಿವಾಲದ ಆದಿಜಾಂಭವಮಠದ ಪೂಜ್ಯರು ದ್ರಾಕ್ಷಿ ಮುನಿಸ್ವಾಮಿಗಳು ಕೈಲಾಸಾಶ್ರಮದ ಪೂಜ್ಯ ವಿದ್ಯಾನಂದಸ್ವಾಮಿಗಳ, ಆನಂದಾಪುರದ ಪೂಜ್ಯ ಮಲ್ಲಿಕಾರ್ಜುನ ಮುರುಘ-ರಾಜೇಂದ್ರಸ್ವಾಮಿಗಳು, ಬೇಲಿಮಠದ ಪೂಜ್ಯ ಶಿವರುದ್ರಸ್ವಾಮಿಗಳು, ಹೈಕೋರ್ಟ್ ನಿವೃತ್ತ ಮುಖ್ಯ ನ್ಯಾಯಾಧೀಶರಾದ ಶ್ರೀ ಡಿ ಎಂ. ಚಂದ್ರಶೇಖರಯ್ಯನವರು, ಪ್ರೊ ಎಸ್. ಎಸ್. ಆರಕೇರಿಯವರು, ಶ್ರೀಮತಿ ಹೇಮಲತಮಹಿಷಿಯವರು ಭಾಗ-ವಹಿಸಿದ್ದರು. ಆಂದೋಲನದ ಅಧ್ಯಕ್ಷರಾದ ಶ್ರೀ ಜಿ ನಾರಾಯಣ ಸ್ವಾಗತಿಸಿದರು. ಶ್ರೀ ಗೊ ರು ಚನ್ನಬಸಪ್ಪನವರು ಸಂಚಾಲಕರಾಗಿದ್ದು ಕಾರ್ಯ ಕ್ರಮ ನಡೆಸಿಕೊಟ್ಟರು.

ದಿ. 2-10-89 ರ ಗಾಂಧಿಜಯಂತಿಯ ಪುಣ್ಯ ಸಂದರ್ಭದಲ್ಲಿ ತುಮಕೂರು ತಾಲ್ಲೂಕು ಹಾಲನೂರು ಗ್ರಾಮದ ಶ್ರೀ ಸಿದ್ಧಗಂಗಾ ಸಂಯುಕ್ತ ಪದವಿ ಪೂರ್ವ ಕಾಲೇಜಿನಲ್ಲಿ ಪರಮಪೂಜ್ಯಶ್ರೀ ಶ್ರೀ ಗಳವರ 82ನೆ ಹುಟ್ಟುಹಬ್ಬವನ್ನು ಆಚರಿಸಿದ ಸಂದರ್ಭದಲ್ಲಿ ಗೂಳೂರು ಶ್ರೀ ಗಣೇಶ ಗ್ರಾಮಾಂತರ ಪದವಿ ಪೂರ್ವ ಕಾಲೇಜಿನ ಪ್ರಾಂಶುಪಾಲರಾದ ಶ್ರೀ ಕೆ. ಎನ್. ನೀಲಕಂಠಯ್ಯನವರು ಉಪನ್ಯಾಸ ಮಾಡುತ್ತಾ ಶ್ರೀ ಶ್ರೀ ಗಳವರು ಮಾಡಿರುವ ಸೇವೆಯನ್ನು ಸಮಾಜ ಸ್ಮರಿಸಬೇಕೆಂದರು. ಮತ್ತೊಬ್ಬ ಉಪನ್ಯಾಸಕರಾಗಿ ಶ್ರೀ ಆರ್.ಎಸ್ ಗೌರಿಶಂಕರಯ್ಯನವರು ಆಗಮಿಸಿದ್ದರು. ಕಾಲೇಜಿನ ಪ್ರಾಂಶುಪಾಲರು ಅಧ್ಯಕ್ಷತೆ ವಹಿಸಿದ್ದರು.

ಪರಮ ಪೂಜ್ಯ ಶ್ರೀ ಶ್ರೀ ಗಳವರ ಪಾದ ಪೂಜಾ ಕಾರ್ಯಕ್ರಮವನ್ನು ದಿ.9-10-89 ರಂದು ಆಯುಧಪೂಜಾ ಅಂಗವಾಗಿ ಶ್ರೀ ಸಿದ್ಧಗಂಗಾ ಮಹಿಳಾ ಕಾಲೇಜಿನಲ್ಲಿ ಹಮ್ಮಿಕೊಳ್ಳಲಾಗಿತ್ತು. ಸರಳ ಸಮಾರಂಭದಲ್ಲಿ ಶ್ರೀ ಸಿದ್ಧಗಂಗಾ ಕಾಲೇಜಿನ ಪ್ರಾಚಾರ್ಯರೂ, ಮಹಿಳಾ ಕಾಲೇಜಿನ ಪ್ರಾಚಾರ್ಯರೂ, ಅಧ್ಯಾಪಕ, ಮತ್ತು ಸಿಬ್ಬಂದಿ ವರ್ಗದವರೂ ಪರಮ ಪೂಜ್ಯ ಶ್ರೀ ಶ್ರೀ ಗಳವರಿಗೆ ಕಾಣಿಕೆಯನ್ನರ್ಪಿಸಿ ಭಕ್ತಿ ಸಮರ್ಪಣೆಯನ್ನು ಮಾಡಿದರು

ದಿ. 22-10-89 ರಂದು ಅರಸೀಕೆರೆ ತಾಲ್ಲೂಕು ಕಣಕಟ್ಟೆ ಹೋಬಳಿ, ದಿಬ್ಬೂರು ಗ್ರಾಮದಲ್ಲಿ ಪರಮ ಪೂಜ್ಯರ ದಿವ್ಯ ಅಧ್ಯಕ್ಷತೆಯಲ್ಲಿ ಸರ್ವಶರಣರ ಮೇಳ ನಡೆದ ಸಂದರ್ಭದಲ್ಲಿ ಸಾಣೆಹಳ್ಳಿ ಮಠಾಧ್ಯಕ್ಷರಾದಪೂಜ್ಯಶ್ರೀ ಶ್ರೀ ಪಂಡಿತಾರಾಧ್ಯ ಸ್ವಾಮಿಗಳು ಮತ್ತು ಮಾಡಾಳು ವಿರಕ್ತಮಠದ ಪೂಜ್ಯ ಶ್ರೀ ಶ್ರೀ ಗಳಾದ ಶ್ರೀ ಚಂದ್ರಶೇಖರ ಸ್ವಾಮಿಗಳವರು ಧಾರ್ಮಿಕ ಉಪನ್ಯಾಸ ನೀಡಿದರು. ಶ್ರೀ ಹೆಚ್ ವಿ. ವೀರಭದ್ರಯ್ಯ ಮತ್ತು ಕಣಕಟ್ಟೆಮರುಳಪ್ಪನವರು ಸಭೆಯನ್ನುದ್ದೇಶಿಸಿ ಮಾತ-ನಾಡಿದರು ಸೇವಾಕರ್ತರಾದ ಶ್ರೀ ಶಿವರುದ್ರಪ್ಪನವರು ದಾಸೋಹ ಕೈಂಕರ್ಯವನ್ನು ನಡೆಸಿದರು.



# ಅಮೃತ ವಾಣಿ

– ಶ್ರೀಮೋಟಗಿ ಮಲ್ಲಿಕಾರ್ಜುನ " ಕನ್ನಡ ಕವಿ ಕಾಳಿದಾಸ " ಅಥಣಿ.
(ಬೆಳಗಾವಿ ಜಿಲ್ಲೆ)

## ಮಹಾಕವಿಯ ಆಡಿಯ

ಉತ್ಪತ್ಸ್ಯತೇಹಿ ಮಮಕೋಽಪಿ ಸಮಾನ ಧರ್ಮಾ ।
ಕಾಲೋಹ್ಯಯಂ ನಿರವಧಿರ್ವಿಪುಲಾಚ ಪೃಥ್ವೀ ॥

–ಮಹಾಕವಿ ಭವಭೂತಿ

ಅಂದರೆ, ಪೃಥ್ವಿಯೂ ವಿಶಾಲವಾಗಿದೆ, ಕಾಲವೂ ಅನಂತವಾಗಿದೆ. ನನ್ನ ಸತ್ಕಾವ್ಯ ಸೌರಭದ ರಸಾಮೃತವನ್ನು ಸವಿಯುವ ರಸಋಷಿಗಳು ಇಂದಿಲ್ಲ ನಾಳೆ ಹುಟ್ಟಿ ಬಂದೇ ಬರುತ್ತಾರೆ-ಎಂಬ ಭವಿಷತ್ ಭರವಸೆ ಈ ಮಾಹಕವಿಗೆ ಇದ್ದೇ ಇದ.)

## ಶತ್ರುಸಮಾನರು

ಋಣಕರ್ತಾ ದುರ್ನೀತ ಪಿತಾ ಶತ್ರು ।
ವಿನಯ ವಿಧೇಯತಾ ರಹಿತ ಸುತಾ ಶತ್ರು ॥

–" ಕನ್ನಡ ಕವಿ ಕಾಳಿದಾಸ "

(ಅಂದರೆ, ಜೀವನದಲ್ಲಿ ಮಾನವನು ಸತಿ ಸುತಾದಿಗಳ ಮೇಲೆ ಸಾದಲ ಋಣಭಾರತವನ್ನು ಹೋರಿಸಿ ಸತ್ತು ಹೋಗುವವನೊಬ್ಬ ತಂದೆ ಶತ್ರು. ಅಂತೆಯೇ ಪ್ರಾಮಾ-ಣಿಕ ಪವಿತ್ರ ಬಾಳಿನ ತಂದೆಯು ಋಣ ಬಾರವಿಲ್ಲದೆ ಮಕಳನ್ನು ಸಂರಕ್ಷಿಸಿಕೊಂಡು ನಡೆದಿದ್ದರೂ ಅಂತಹ ತಂದೆಯಲ್ಲಿ ವಿನಯ ವಿದೇಯತೆಯನ್ನಿರಿಸಿಕೊಳ್ಳದೆ ಸ್ವೆರಾಚರಣೆಯಿಂದ ನೆಡೆಯುವ ಸುತರೂ ಶತ್ರು ಸಮಾನರು.)

## ಕೂರ್ಮಶಿಶು ಸ್ನೇಹ ನ್ಯಾಯ.

ವ್ಯತಿಷಜತಿ ಪದಾರ್ಥಾನ್ ಆಂತರಃ ಕೋಽಪಿ ಹೇತುಃ ।
ನತುಕಲು ಬಹಿರುಪಾಧೀನ್ ಪ್ರೀತಮಃ ಸಂಶ್ರಯಂತೇ ॥

–ಮಹಾ ಕವಿ ಭವಭೂತಿ.

(ಆಂತಂಕವಾದ ಯಾವುದೋಕಾರಣ ಎರಡು ವಸ್ತುಗಳ ಪ್ರೀತಿಯನ್ನು ಹೆಣೆಯು-ತ್ತದೆ. ಅದು ಬಹಿರುಪಾಧಿಗಳನ್ನು ಆಶ್ರಯಿಸಿದ್ದಲ್ಲ-ಎಂದು ಇದರ ಅರ್ಥ. ಇದ-ನೆಲ್ಲಾ ಶರಣರ ವಚನಗಳಲ್ಲಿ ಬರುವ ' ಕೂರ್ಮಶಿಶುನ್ಯಾಯ ' ಎನ್ನುವುದು. ಕರ್ಮ ಶಿಶುಗಳು ಮೇಯಲು ಬೇರೆಡೆಯಲ್ಲಿ ಹೋಗಿದ್ದ ತಾಯಿಯನ್ನು ನೆನೆದೊಡೆನೆ. ತಾಯಿಗೂ ಮರಿಗಳ ಮೇಲಿನ ವಾತ್ಸಲಕೆ ಉಕ್ಕಿ ಧಾವಿಸಿ ಬರುತ್ತದರತೆ.)

## ಆತ್ಮಸ್ವಾತಂತ್ರ್ಯ

ತನ್ನ ಶಿಲುಬೆಯನೆ ತಾನೆ ಹೊತ್ತ ಕ್ರಿಸನಂತೆ
ತನ್ನ ಹಣವನೆ ತಾನೆ ಹೋತ್ತನಲಾ ಮುಂನೆ
ಕನ್ನಡ ಕವಿ ಕಾಳಿವಾಸ ಧರ್ಮಜ್ಞ !

-"ಧರ್ಮಜ್ಞ ಕವಿ"

(ಯಾರು ತಮ್ಮ ಜೀವನಾವಧಿಯಲ್ಲಿಯೇ ಪ್ರಕೃತಿಯಮೇಲೆ ಪ್ರಭುತ್ವವನ್ನು ಸಾಧಿಸಿರುವರೋ ಅಂತಹರು ಆತ್ಮ ಸ್ವಾತಂತ್ರ್ಯವನ್ನು ಪಡೆದಿರುತ್ತಾರೆ-ಎಂಬುದೇ ಇಲ್ಲಿ "ತನ್ನ ಹೆಣವನೆ ತಾನೆ ಹೊತ್ತಸಲಾ" ಎಂಬೀ ಬೆಡಗಿನ ಪದದ ವಚನಾರ್ಥ. ಮೋಕ್ಷಸಾಧನೆಯೆಂಬುವುದು ಇಹ ಲೋಕದಲ್ಲಿಡೆಯೇ ಹೊರತು ಪರಲೋಕದಲ್ಲಿಲ್ಲ)

## ಶ್ರೀ ಗುರು ಬಸವ ಲಿಂಗ ಲೀಲೆ !

(ಕಾವ್ಯ ಕಾಮಧೇನು)

"ಶರಣ ಮಧ್ಯೇ ಲಿಂಗ ಸಕಳಂ" ' ಲಿಂಗಮಧ್ಯೇ ಜಗತ್ ಸರ್ವಂ ।
ಶರಣ ಗುರುಲಿಂಗ ಜಂಗಮ ಭರಿತಂ ಚರಣಜಳ ಪ್ರಸಾದ ಹೃದಯಂ ॥
ಶರಣ ಬ್ರಹ್ಮಾಂಡಗತಂ ಸೃಷ್ಟಿಯುತ್ಪತ್ತಿಲಯ ಕಾರಣ ಪುರುಷಂ ।
ಶರಣ ನಿರಂಜನ ಬಸವಂ ಅನಾದಿ ಶರಣ ಪರಶಿವಂ ಪ್ರಭುವಂ ॥

-"ಧರ್ಮಜ್ಞ ಕವಿಕೃತ"- "ಶ್ರೀ ಬಸವರಾಜದರ್ಶನಂ"
ಮಹಾಛಂದಸ್ಸಿನ ಕಾವ್ಯ.

(ಲಿಂಗವು ತನ್ನ ಗರ್ಭದಲ್ಲಿ ಚರಾಚರಾತ್ಮಕವಾದ ಸಕಲ ವಿಶ್ವವನ್ನೇ ಇರಿಸಿಕೊಂಡಿದ್ದು ಶಿವಸ್ವರೂಪವಾಗಿ ಪೂರ್ಣವೆನಿಸಿದೆ. ಆದರೆ ಇಂತಹ ಮಹಲಿಂಗವನ್ನೇ ತನ್ನ ಹೃತ್ಕಮಲ ಮಧ್ಯದಲ್ಲಿರಿಸಿಕೊಂಡ ಅನಾದಿ ಶರಣ ಬಸವೇಶ್ವರನು ಗುರುಲಿಂಗ ಜಂಗಮ ಸ್ವರೂಪ ನೂಪ್ರಸಾದ ಹೃದಯನೂ ಬ್ರಹ್ಮಾಡವನ್ನೇ ವ್ಯಾಪಿಸಿದವನೂ ಸಕಲ ಸೃಷ್ಟಿಯುತ್ಪತ್ತಿಲಯ ಕಾರಣಪುರುಷನೂ ಏನಿಸಿ ಪರಶಿವಜ್ಞಾನ ಜ್ಯೋತಿಯೆನಿಸಿದ್ದಾನೆ.

## ಅಮೃತಕ್ಕಿಂತ ಸಿಹಿ ಕವಿಯ ವಾಕ್ಯ.

"ಮಧುರಂ ಮಧು ತನಾಚ್ಚಸುಧಾ ತಸಾಕಿಕವೇರ್ವಚಃ"

-ಸುಭಾಷಿತ (ಚಂದ್ರಬೋಕೆ)

(ಜೇನು ತುಪ್ಪ ಸಹಿ, ಆದಕಿಂತ ಸಿಹಿ ಅಮೃತ, ಆದನ್ನೂ ಮೀರಿಸಿದ್ದು ಕವಿಯ ವಾಕ್ಯ "ರವಿಕಾಣದುದನು ಕವಿಕಂಡ" ಎನ್ನುವುದು ಅದಕ್ಕಾಗಿ.)



## ಸಿದ್ಧಗಂಗಾ ಮಾಸ ಪತ್ರಿಕೆಯ ಸಲಹಾ ಮಂಡಳಿ

1 ಟಿ. ಕೆ. ನಂಜುಂಡಪ್ಪನವರು, ಕಾರ್ಯದರ್ಶಿಗಳು, ಸಿದ್ಧಗಂಗಾವಿದ್ಯಾಸಂಸ್ಥೆ, ತುಮಕೂರು.
2 ಜಿ. ನಂಜಪ್ಪನವರು, ಆಡಳಿತಾಧಿಕಾರಿಗಳು, ಸಿದ್ದಗಂಗಾ ವಿದ್ಯಾಸಂಸ್ಥೆ, ಸಿದ್ದಗಂಗಾ ಮಠ
3 ಕೆ. ಎಂ ರೇವಣಸಿದ್ದಯ್ಯನವರು, ವಿಶೇಷಾಧಿಕಾರಿಗಳು, ಸಿದ್ಧಗಂಗಾ ಮಠ.
4 ಡಾ|| ಎಂ. ಎನ್, ಚನ್ನಬಸಪ್ಪನವರು, ಪ್ರಾಧ್ಯಾಪಕರು, ರೀಜನಲ್ ಕಾಲೇಜ್ ಆಫ್ ಇಂಜನಿಯರಿಂಗ್, ಮಣಿಪಾಲ, ದ. ಕ.
5 ಶ್ರೀ ಜಿ. ಪರಮೇಶ್ವರಪ್ಪನವರು ಪ್ರಾಚಾರ್ಯರು, ಎಸ್.ಐ.ಟಿ, ತುಮಕೂರು.
6 ಶ್ರೀ ಎಂ. ವಿ. ಸಿದ್ಧಲಿಂಗಮೂರ್ತಿಯವರು ಪ್ರಾಚಾರ್ಯರು, ಸಿದ್ಧಗಂಗಾ ಶಿಕ್ಷಣ ಮಹಾವಿದ್ಯಾಲಯ, ತುಮಕೂರು.
7 ಶ್ರೀ ಜಿ. ಶಿವಶಂಕರ್, ಪ್ರಾಚಾರ್ಯರು, ಸಿದ್ದಗಂಗಾ ಕಲಾ ವಿಜ್ಞಾನ ಮತ್ತು ವಾಣಿಜ್ಯ ಕಾಲೇಜು, ತುಮಕೂರು
8 ಶ್ರೀ. ಕೆ. ಹೆಚ್. ಪರಮಶಿವಯ್ಯ, ಪ್ರಾಚಾರ್ಯರು ಸಿದ್ಧಗಂಗಾ ಮಹಿಳಾ ಕಾಲೇಜು, ತುಮಕೂರು
9 ಶ್ರೀ. ಸಿ. ಎಸ್. ಸಿದ್ಧಲಿಂಗಯ್ಯ, ಪ್ರಾಚಾರ್ಯರು, ಸಿದ್ಧಗಂಗಾ ಪದವಿ ಪೂರ್ವ ಕಾಲೇಜು, ತುಮಕೂರು
10 ಶ್ರೀ ಹೆಚ್.ಬಿ ಗಂಗಾಧರಯ್ಯ, ಅಧೀಕ್ಷಕರು, ಬಸವೇಶ್ವರ ಶಿಕ್ಷಕರ ತರಬೇತಿ ಮಹಾವಿದ್ಯಾಲಯ ಶ್ರೀಮಠ
11 ಶ್ರೀ. ಎಸ್. ಪಿ. ಶಿವಶಂಕರ್, ಪ್ರಾಚಾರ್ಯರು, ಸಂಸ್ಕೃತ ಕಾಲೇಜು, ಶ್ರೀ ಮಠ
12 ಶ್ರೀ. ಕೆ. ಸಿ ಶಿವಗಂಗಯ್ಯ, ಮುಖ್ಯೋಪಾಧ್ಯಾಯರು ಶ್ರೀ ಬಸವೇಶ್ವರ ಉನ್ನತ ಪ್ರೌಢ ಶಾಲೆ, ಶ್ರೀ ಮಠ
!3 ಶ್ರೀ. ಎಸ್. ವಿಶ್ವನಾಥಯ್ಯ, ಮುಖ್ಯೋಪಾಧ್ಯಾಯರು ಶ್ರೀ ಸಿದ್ದಲಿಂಗೇಶ್ವರ ಸನಿವಾಸ ಪ್ರೌಢಶಾಲೆ, ಶ್ರೀ ಮಠ

## ನುಡಿ ಮುತ್ತು

ಆಧ್ಯಾತ್ಮಿಕ ಜೀವನಕ್ಕೆ ಅಂತರ್ಮುಖಿಯಾಗಿ ಪೂರ್ಣಆತ್ಮ ನಿವೇದನೆ ಅವಶ್ಯಕ ಈ ಯೋಗದಲ್ಲಿ ಮುಂದುವರಿಯಲು ಮಾನಸಿಕ ಪಕ್ಷಪಾತದಿಂದ ದೂರವಾಗಬೇಕು

ಪ್ರಾಣಮಯ ಆಶೆ ಆಸಕ್ತಿ ಮತ್ತು ಸಂಗಗಳನ್ನು ತ್ಯಜಿಸಬೇಕು ಹಾಗೂ ಸ್ವಜನರು ಸ್ನೇಹ ಸ್ವದೇಶ ಇವುಗಳಿಗೆ ಅಹಂಕಾರ ಭಾವದಿಂದ ಅಂಟಿಕೊಳ್ಳಬಾರದು.

ಸಾಧನೆಯಲ್ಲಿ ಮನಸ್ಸು, ದೇಹ ಮತ್ತು ಪ್ರಾಣಶಕ್ತಿ ಇವು ಮೂರು ಸಬಲವಾಗಿರಬೇಕು. ತಮಸ್ಸನ್ನು ದೂರಮಾಡಿ ಆಧಾರದಲ್ಲಿ ತೇಜೋಪೂರ್ಣ ಸಾಮರ್ಥ್ಯವನ್ನು ತರಲು ಯತ್ನಿಸಬೇಕು. ಯೋಗ ಪಥ ಜೀವಾಂತವಾದುದು.

## ಶ್ರೀ ಶ್ರೀ ಗಳವರ ಈ ತಿಂಗಳ ಕೆಲವು ಕಾರ್ಯಕ್ರಮಗಳು

1-10-89 ಚಿತ್ರದುರ್ಗ ಶ್ರೀ ಮನ್ಮಹಾರಾಜ ಜಗದ್ಗುರು ಶ್ರೀ ಶ್ರೀ ಮಲ್ಲಿಕಾರ್ಜುನ ಮುರುಘರಾಜೇಂದ್ರ ಸ್ವಾಮಿಗಳವರ ಪೀಠಾರೋಹಣ ಮಹೋತ್ಸವದ 25 ನೆಯವರ್ಷಬೆಳ್ಳಿ ಹಬ್ಬ ಸಮಾರಂಭದ ಅಧ್ಯಕ್ಷತೆ.

2-10-89 ಬೆಂಗಳೂರು ಪಾನ ನಿರೋಧ ಚಳುವಳಿ ಸಮಾರಂಭದ ಅಧ್ಯಕ್ಷತೆ.

2-10-89 ಬೆಂಗಳೂರು ಡಾ|| ಶಿವಪ್ಪನವರ ಷಾಪ್ ಆರಂಭೋತ್ಸವ.

4-10-89 ತುಮಕೂರು ನಿವೃತ್ತರಾದ ಸಿದ್ಧಗಂಗಾ ಶಿಕ್ಷಣ ತರಬೇತಿ ಸಂಸ್ಥೆಯ ಪ್ರಾಚಾರ್ಯರಾದ ಶ್ರೀ ಸೋಮಶೇಖರ್ ಅವರ ಬೀಳ್ಕೊಡಿಕೆಯ ಸಮಾರಂಭದ ಅಧ್ಯಕ್ಷತೆ.

5-10-89 ಹಲಸಹಳ್ಳಿ ಪೂಜೆ.

6-10-89 ಶ್ರೀ ಸಾಗರನಹಳ್ಳಿ, ಗುಬ್ಬಿ ತಾಲ್ಲೂಕು ರೇವಣ್ಣನವರ ಮನೆಯಲ್ಲಿ ಪೂಜೆ

7-10-89 ಚಳ್ಳಕೆರೆ. ಬ್ಯಾಂಕಿನ ಆರಂಭೋತ್ಸವ.

8-10-89 ಬೆಂಗಳೂರು ಸಾರಕ್ಕಿ ಲೇಔಟ್ ವೀರಭದ್ರಸ್ವಾಮಿ ದೇವಸ್ಥಾನದ ಪರಿಶೀಲನೆ

9-10-89 ತುಮಕೂರು ಎಸ್.ಐ.ಟಿ. ಮತ್ತು ಶ್ರೀ ಸಿದ್ಧಗಂಗಾ ಮಹಿಳಾ ಕಾಲೇಜಿನಲ್ಲಿ ಆಯುಧ ಪೂಜಾ ಸಮಾರಂಭದ ಅಂಗವಾಗಿ ಪಾದ ಪೂಜೆ.

11-10-89 ಯಲ್ಲಾಪುರ, ಧಾರ್ಮಿಕ ಸಮಾರಂಭದ ಅಧ್ಯಕ್ಷತೆ.

13-10-89 ಬೆಂಗಳೂರು ವಿನಾಯಕನಗರ, ಶ್ರೀ ಹೆಚ್. ಜಿ. ಬಸಪ್ಪನವರ ಮನೆಯ ಪೂಜೆ.

14-10-89 ರಾಮನಗರ ತಾ|| ಜಾಲಮಂಗಲ ಸರ್ವಶರಣರ ಮೇಳದ ಅಧ್ಯಕ್ಷತೆ.

15-10-89 ಬೆಂಗಳೂರು ಬಸವಗಂಗೋತ್ರಿಯಲ್ಲಿ ನಡೆದ ಶಿವಾನುಭವ ಶಿಬಿರದ ಅಧ್ಯಕ್ಷತೆ.

18-10-89 ತುಮಕೂರು ಶ್ರೀ ಜಿ.ಎಂ.ಎಸ್. ಲಾಡ್ಜ್‌ನ ಆರಂಭೋತ್ಸವದ ಅಂಗವಾಗಿ ಪಾದ ಪೂಜೆ.

21-10-89 ಬೆಂಗಳೂರು ಮಾಧವನಗರ ಗುರು ಮಂದಿರಕ್ಕೆ ಭೇಟಿ.

22-10-89 ಅರಸೀಕೆರೆ ತಾ|| ದಿಬ್ಬೂರ ಗ್ರಾಮದಲ್ಲಿ ಸರ್ವಶರಣರ ಮೇಳದ ಅಧ್ಯಕ್ಷತೆ

,, ,, ಬೆಂಗಳೂರು ಶ್ರೀಮತಿ ಅಂಬುಜಮ್ಮನವರ ಮನೆಯಲ್ಲಿ ಪಾದ ಪೂಜೆ.

23-10-89 ಕೆಂಪಚಿಕ್ಕನಹಳ್ಳಿ, ಶ್ರೀ ಚಂದ್ರಶೇಖರಯ್ಯನವರ ಮನೆಯಲ್ಲಿ ಪೂಜೆ.

25-10-89 ತುಮಕೂರು ಕರ್ನಾಟಕ ರಾಜ್ಯದ ಅಂಗವಿಕಲರ ಸಮ್ಮೇಳನದ ಅಧ್ಯಕ್ಷತೆ.

,, ,, ಮದ್ದೂರ್ ತಾ|| ಆಲಕೆರೆಗ್ರಾಮದಲ್ಲಿ ಶ್ರೀ ಎಂ. ರುದ್ರಯ್ಯನವರ ಮನೆಯಲ್ಲಿ ಪೂಜೆ.

26-10-89 ನಂಜನಗೂಡು ತಾ|| ಮಲ್ಲನಮೂಲೆ ಮಠದಲ್ಲಿ ಪೂಜೆ.

28-10-89 ಬೆಂಗಳೂರು ಲೋಕವಾಣಿ ಪತ್ರಿಕೆ ಸಮಾರಂಭ ನೇತೃತ್ವ

30-10-89 ಹಿರೇಹಳ್ಳಿ ಟಿ.ವಿ ಎಸ್. ಫ್ಯಾಕ್ಟರಿ ಸಮಾರಂಭದ ಅಧ್ಯಕ್ಷತೆ.

"SIDDAGANGA" MONTHLY Reg No KRN Q-9

## ಬಸವ ಸಾಹಿತ್ಯ ಪ್ರೇಮಿಗಳಲ್ಲಿ ಒಂದು ಮನವಿ

### "ಕರ್ತಾರನ ಕಮ್ಮಟ"

ಶರಣ ಸಾಹಿತ್ಯ ರತ್ನ, ಡಾ॥ ಹೆಚ್. ತಿಪ್ಪೇರುದ್ರಸ್ವಾಮಿಯವರಿಂದ ರಚಿತವಾಗಿರುವ, ಬಸವಣ್ಣನವರ ದಿವ್ಯ ಜೀವನವನ್ನು ಕುರಿತ ಮಹೋನ್ನತವಾದ ಕಾದಂಬರಿ "ಕರ್ತಾರನ ಕಮ್ಮಟ"ದ ತೃತೀಯ ಮುದ್ರಣದ ಪ್ರತಿಗಳು ಮಾರಾಟಕ್ಕೆ ಶೀಘ್ರದಲ್ಲಿಯೇ ಬಿಡುಗಡೆಯಾಗಲಿವೆ. "ಶ್ರೀ ಸಿದ್ಧಗಂಗಾ ಮಠದ ವತಿಯಿಂದ" ಪ್ರಕಟವಾಗುತ್ತಿರುವ ಕರ್ತಾರನ ಕಮ್ಮಟ ಸಮಾಜ ಬಾಂಧವರೆಲ್ಲರೂ ಓದಲೇಬೇಕಾದ ಮಹತ್ವಪೂರ್ಣ ಕೃತಿ. ಗ್ರಂಥದ ಗಾತ್ರ ಎಂಟುನೂರು ಪುಟಗಳಷ್ಟಿದ್ದು, "ಪರಮಪೂಜ್ಯ ಶ್ರೀ ಶ್ರೀ ಗಳವರ ಸುಂದರವಾದ ಭಾವಚಿತ್ರವನ್ನು ಒಳಗೊಂಡಿರುತ್ತದೆ". ಬೆಲೆ ಎಂಬತ್ತು ರೂಪಾಯಿಗಳಾಗುವಂತಿದ್ದರೂ ಬಸವತತ್ವ ಪ್ರಸಾರದ ದೃಷ್ಟಿಯಿಂದ ಕೇವಲ ಇಪ್ಪತ್ತೈದು ರೂಪಾಯಿಗಳಿಗೆ ಮಾರುವ ವ್ಯವಸ್ಥೆ ಮಾಡಲಾಗಿದೆ. ಆಸಕ್ತರು ಶ್ರೀ ಮಠದ "ಶ್ರೀ ಸಿದ್ಧಗಂಗಾ" ಪತ್ರಿಕಾಲಯದ ಈ ವಿಳಾಸಕ್ಕೆ ಸಂಪರ್ಕಿಸಲು ಕೋರಲಾಗಿದೆ.

ಸಿದ್ಧಗಂಗಾ ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಮಠ
ತುಮಕೂರು ಜಿಲ್ಲೆ.

ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಮಠ